ನೆಹರೂ ಬಾಲ ಪುಸ್ತಕಾಲಯ

# ಚಹಾ ಕುರಿತ ಒಂದು ಕಥೆ

ಅರೂಪ್ ಕುಮಾರ್ ದತ್ತ

ಅನುವಾದ:

ವಿ. ನಾಗರಾಜ ರಾವ್

ಚಿತ್ರಗಳು:

ಮೃಣಾಳ್ ಮಿತ್ರ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ.



1991 (ಶಕ 1913)



ರೂ. **5.50**

A Story About Tea (*Kannada)*

ನಿರ್ದೇಶಕರು, ನ್ಯಾಶನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-5, ಗ್ರೀನ್ ಪಾರ್ಕ್, ಹೊಸ ದೆಹಲಿ-110 016
ಇವರಿಂದ ಪ್ರಕಟಿತ

# 1

ಉದ್ದನಾದ ಮೀಟರ್ ಗೇಜ್ ರೈಲು ರಸ್ತೆ ಬದಿಯ ಸಣ್ಣ ನಿಲ್ದಾಣವೊಂದರಲ್ಲಿ ನಿಂತಿತು. ಎಂಜಿನ್ ಚಾಲಕ ಬ್ರೇಕ್ ಹಾಕುತ್ತಿದ್ದಂತೆಯೇ ರೈಲಿನುದ್ದಕ್ಕೂ ಕಟ-ಕಟ-ಕಟ-ಕಟ ಶಬ್ದ. ನಿದ್ದೆಯಲ್ಲಿದ್ದ ರಾಜ್‌ವೀರ್ ಸಿಂಗ್ ಆ ಸದ್ದಿನಿಂದ ಎದ್ದ. ರಾಜವೀರ್ ಒಬ್ಬ ಸಿಖ್ ಬಾಲಕ. ಹದಿಮೂರು ವರ್ಷ ವಯಸ್ಸು. ಅವನ ಗೆಳೆಯ ಪ್ರಾಂಜಲ್ ಕಿಟಕಿಯ ಬಳಿ ಕುಳಿತು ಪತ್ತೇದಾರಿ ಕಥೆಯನ್ನು ಓದುತ್ತಾ ಅದರಲ್ಲೇ ಮುಳುಗಿಹೋಗಿದ್ದ.

ಪ್ರಾಂಜಲ್ ಹುಟ್ಟಿನಿಂದ ಅಸ್ಸಾಮಿಗೆ ಸೇರಿದ ಹುಡುಗ. ಅವನು ಡೆಲ್ಲಿಯ ಶಾಲೆಯೊಂದರಲ್ಲಿ ರಾಜವೀರ್‌ನ ಸಹಪಾಠಿ. ಅವನ ತಂದೆ ಮೇಲಣ ಅಸ್ಸಾಂನ ಟೀ ತೋಟವೊಂದರ ಮ್ಯಾನೇಜರ್. ಅದರ ಎಲ್ಲಾ ಕೆಲಸಗಳ ಮೇಲೂ ಅವರದೇ ಉಸ್ತುವಾರಿ. ಬೇಸಿಗೆಯ ರಜಾ ದಿನಗಳಲ್ಲಿ ತನ್ನೂರಿಗೆ ಬರಬೇಕೆಂದು ಪ್ರಾಂಜಲ್ ರಾಜವೀರ್‌ನನ್ನು ಆಹ್ವಾನಿಸಿದ್ದ. ರಾಜವೀರ್ ಉತ್ಸಾಹ ದಿಂದಲೇ ಒಪ್ಪಿಕೊಂಡಿದ್ದ.

ಡೆಲ್ಲಿಯಿಂದ ಅಸ್ಸಾಮಿಗೆ ತುಂಬ ದೀರ್ಘವಾದ ಪ್ರಯಾಣ. ಎರಡು ಹಗಲು ಮತ್ತು ಎರಡು ರಾತ್ರಿಗಳನ್ನು ಅವರಿಬ್ಬರೂ ರೈಲಿನಲ್ಲೇ ಕಳೆದಿದ್ದರು. ದಾರಿಯಲ್ಲಿ ಅವರು ಅನೇಕ ರೀತಿಗಳ ಭೂ ದೃಶ್ಯ ಗಳನ್ನು ನೋಡಿದ್ದರು. ಕಡೆಗೆ ಈಗ ಅವರ ಪ್ರಯಾಣದ ಗುರಿಯಾದ ಸ್ಥಳದ ಹತ್ತಿರ ಬಂದಿದ್ದರು.

"ಎದ್ದೇಳೋ, ನಿದ್ದೆಮುದ್ದೆ", ಪ್ರಾಂಜಲ್ ಉತ್ಸಾಹದಿಂದ ಕೂಗಿದ. "ಮುಂದೆ ಬರುವ ನಿಲ್ದಾಣವೇ ಮರಿಯಾನಿ. ಅಲ್ಲೇ ನಾವಿಳಿಯಬೇಕು. ಇಲ್ಲೊಂದು ಬಟ್ಟಲು ಚಹಾ ಕುಡಿ. ನಿನಗೆ ಪೂರ್ತಿ ಎಚ್ಚರಿಕೆಯಾಗುತ್ತೆ. ಚಹದಲ್ಲಿ ಕೆಫೀನ್ ಇದೆ ಅಂತ ಗೊತ್ತಲ್ಲ ನಿನಗೆ."

"ಓಹ್, ಈ ಕ್ಷಣ ರೆಡಿ ಆಗ್ತೀನಿ" ಎಂದವನೇ ರಾಜವೀರ್ ಹಾಸಿಗೆಯಿಂದ ಹಾರಿ ತನ್ನ ಸಾಮಾನುಗಳನ್ನೆಲ್ಲಾ ಪೆಟ್ಟಿಗೆಯಲ್ಲಿ ತುಂಬಿದ. ಅಷ್ಟೇ ಬೇಗ ಮುಖ ತೊಳೆದದ್ದಾಯಿತು. ಶುಭ್ರವಾದ ಬೇರೆ ಉಡುಪು ಬದಲಾಯಿಸಿಕೊಂಡು ಗೆಳೆಯನಿಗೆದುರಾಗಿ ಕೂತ.



"ಚಾಯ್ ಗರಮ್... ಗರಮ್ ಚಾಯ್", ಹೊರಗೆ ಟೀ ಮಾರುವವನು ಏರಿದ ದನಿಯಲ್ಲಿ ಕೂಗಿದ. ಕಿಟಕಿಯ ಪಕ್ಕಕ್ಕೆ ಬಂದು "ಚಾಯ್, ಸಾಬ್" ಎಂದು ಕೇಳಿದ.

"ಎರಡು ಕಪ್" ಎಂದು ಹೇಳಿದ ಪ್ರಾಂಜಲ್

ಆವಿ ಬಿಡುತ್ತಿದ್ದ ಬಿಸಿಬಿಸಿ ಟೀಯನ್ನು ಇಬ್ಬರೂ ಗುಟುಕುಗುಟುಕಾಗಿ ಕುಡಿದರು. ಆ ರೈಲು ಬಂಡಿಯಲ್ಲಿದ್ದ ಬೇರೆಯವರೂ ಚಹಾ ಕುಡಿಯುತ್ತಿದ್ದರು.

"ಈ ನಮ್ಮ ಜಗತ್ತಿನಲ್ಲಿ ಪ್ರತಿದಿನ 80 ಕೋಟಿ ಬಟ್ಟಲು ಟೀ ಕುಡಿಯುತ್ತಾರೆಂದು ನಿನಗೆ ಗೊತ್ತೆ ?" ರಾಜವೀರ್ ಕೇಳಿದ.

"ಓಹೋ," ಪ್ರಾಂಜಲ್ ಆಶ್ಚರ್ಯದಿಂದ ಹೇಳಿದ. "ಅಂದರೆ ಟೀ ತುಂಬ ಜನಪ್ರಿಯ!"



ರೈಲು ನಿಲ್ದಾಣದಿಂದ ಹೊರಟಿತು. ಪ್ರಾಂಜಲ್ ಮತ್ತೆ ತನ್ನ ಪತ್ತೇದಾರಿ ಕಾದಂಬರಿಯೊಳಗೆ ಕಣ್ಣಿಟ್ಟ. ರಾಜವೀರ್‌ಗೆ ಕೂಡ ಪತ್ತೇದಾರಿ ಕಾದಂಬರಿಗಳೆಂದರೆ ಬಲು ಇಷ್ಟ. ಆದರೆ ಈಗಂತೂ ಅವನಿಗೆ ಹೊರಗಿನ ಸುಂದರ ದೃಶ್ಯಗಳ ಮೇಲೆಯೇ ಆಸಕ್ತಿ.

ಹೊರಗೆ ಎಲ್ಲೆಲ್ಲೂ ಹಸಿರೋ ಹಸಿರು. ರಾಜವೀರ್ ಹಿಂದೆಂದೂ ಅಷ್ಟು ಪಚ್ಚೆ ನೆಲವನ್ನು ನೋಡಿಯೇ ಇರಲಿಲ್ಲ. ನೋಡುತ್ತಿದ್ದಂತೆ ಮೃದುವಾದ ಹಸಿರು ಬತ್ತದ ಗದ್ದೆಗಳ ಬದಲು ಟೀ ಗಿಡಗಳು ಕಾಣಲಾರಂಭಿಸಿದವು.

ಆದೊಂದು ಅದ್ಭುತವಾದ ನೋಟವಾಗಿತ್ತು. ದಟ್ಟವಾಗಿ ಮರಗಳ ಹೊದಿಕೆಯಿದ್ದ ಬೆಟ್ಟಗಳ ಸಾಲು ಹಿಂದೆ. ಅದರ ಮುಂದೆ ಕಣ್ಣಿಗೆ ಕಾಣುವಷ್ಟು ದೂರವೂ ಚಹಾ ಗಿಡಗಳು. ನೆರಳು ಚೆಲ್ಲುವ ದೊಡ್ಡ ಮರಗಳು ಸಣ್ಣ ಚಹಾ ಪೊದರುಗಳನ್ನು ಇನ್ನೂ ಸಣ್ಣವಾಗಿ ಕಾಣುವಂತೆ

ಮಾಡಿದ್ದುವು. ಒಂದೇ ಸಮನಿದ್ದ ಪೊದರು ಸಾಲುಗಳ ನಡುವೆ ಬೊಂಬೆಗಳಂತೆ ನಡೆದಾಡುತ್ತಿದ್ದ ಜನ. ದೂರದಲ್ಲಿ ಒಂದು ವಿಕಾರವಾದ ಕಟ್ಟಡ. ಅದರಲ್ಲಿ ಎತ್ತರವಾದ ಚಿಮ್ನಿಗಳಿಂದ ಹೊಗೆ ಮೇಲೇಳುತ್ತಿತ್ತು.

"ಏಯ್, ಟೀ ತೋಟ ಬಂತು!" ರಾಜವೀರ್ ಉತ್ಸಾಹದಿಂದ ಕೂಗಿದ.

ಟೀ ತೋಟದಲ್ಲೇ ಹುಟ್ಟಿ ಅಲ್ಲೇ ಬೆಳೆದಿದ್ದ ಪ್ರಾಂಜಲ್‌ನಲ್ಲಿ ರಾಜವೀರ್‌ನ ಸಂಭ್ರಮ ಕಾಣಿಸಲಿಲ್ಲ.

"ಇದೆಲ್ಲ ಇನ್ನು ಚಹಾದೇಶವೇ. ಪ್ರಪಂಚದಲ್ಲೇ ಅತಿಹೆಚ್ಚಿನ ಟೀ ತೋಟಗಳು ಅಸ್ಸಾಂನಲ್ಲಿವೇ. ಇಲ್ಲಿ ಟೀ ತೋಟಗಳನ್ನು ನೋಡುತ್ತಲೇ ಜೀವನವನ್ನೆಲ್ಲ ಕಳೆಯಬಹುದು."

"ಈಚೆಗೆ ನಾನು ಚಹಾ ಕುರಿತು ಸಾಕಷ್ಟು ಓದುತ್ತಿದ್ದೇನೆ," ರಾಜವೀರ್ ಹೇಳಿದ. "ಅದನ್ನು ಮೊದಲು ಕಂಡುಹಿಡಿದವರು ಯಾರೆಂದು ಯಾರಿಗೂ ತಿಳಿಯದು. ಆದರೆ ಬೇಕಾದಷ್ಟು ಕತೆಗಳಿವೆ."

"ಏನು ಕತೆಗಳು?"

"ಹಾ, ಚೀಣಾದ ಒಬ್ಬ ಚಕ್ರವರ್ತಿಯ ಕಥೆಯೇ ಇದೆಯಲ್ಲ. ಅವನು ಯಾವಾಗಲೂ





ಕಾಯಿಸಿ ಕುದಿಸಿದ ನೀರನ್ನೇ ಕುಡಿಯುತ್ತಿದ್ದನಂತೆ. ಒಂದು ದಿನ ನೀರಿನ ಪಾತ್ರೆಯ ಕೆಳಗೆ ಉರಿಯುತ್ತಿದ್ದ ಸಣ್ಣ ರೆಂಬೆಗಳ ಕಡ್ಡಿ ತುಂಡುಗಳು ನೀರಿನೊಳಕ್ಕೆ ಬಿದ್ದುವಂತೆ. ನೀರು ಕುಡಿದಾಗ ಅದರಲ್ಲಿ ಘಮಘಮ ಎನ್ನುವ ಪರಿಮಳವಿತ್ತು. ಅವು ಟೀ ಎಲೆಗಳಿದ್ದ ಕಡ್ಡಿಗಳೆಂದು ಹೇಳುತ್ತಾರೆ."

"ಒಳ್ಳೆ ಕಥೆ ಕಣ್ಣಯ್ಯ. ಇನ್ನೇನಿನ್ನಿಟ್ಟಿದೀ?" ಪ್ರಾಂಜಲ್ ಹಾಸ್ಯದಿಂದ ಕೇಳಿದ.

"ನಮ್ಮದೇ ಭಾರತದ್ದು ಒಂದು ಕಥೆ ಇದೆ ನೋಡು. ಬಹಳ ಹಿಂದೆ ಬೋಧಿಧರ್ಮ ಅಂತ ಒಬ್ಬ ಬೌದ್ಧ ಸನ್ಯಾಸಿ ಇದ್ದ. ಅವನು ಧ್ಯಾನಕ್ಕೆ ಕೂತಾಗ ನಿದ್ದೆ ಬಂತಂತೆ. ಅದಕ್ಕಾಗಿ ಅವನು ತನ್ನ ಕಣ್ಣು ರೆಪ್ಪೆಗಳನ್ನೇ ಕತ್ತರಿಸಿ ಹಾಕಿಬಿಟ್ಟ. ಆ ರೆಪ್ಪೆಗಳಿಂದ ಹತ್ತು ಟೀ ಗಿಡಗಳು ಬೆಳೆದುವಂತೆ. ಆ ಗಿಡಗಳ ಎಲೆಗಳನ್ನು ಬಿಸಿ ನೀರಲ್ಲಿ ಹಾಕಿ ಕುಡಿದಾಗ ನಿದ್ದೆಯನ್ನು ಓಡಿಸಿದುವು."

ಮತ್ತೆ ರಾಜವೀರನೇ ಹೇಳಿದ: "ಚಹಾ ಕುಡಿಯಲು ಮೊಟ್ಟಮೊದಲು ಪ್ರಾರಂಭವಾದದ್ದು ಚೀಣದಲ್ಲಿ - ಕ್ರಿಸ್ತಪೂರ್ವ 2700 ವರ್ಷಗಳಷ್ಟು ಹಿಂದೆ. ಟೀ, ಚಾಯ್, ಚೀನೀ ಮುಂತಾದ ಪದಗಳೇ ಚೀಣದಿಂದ ಬಂದವು. ಎಷ್ಟೋ ವರ್ಷಗಳ ನಂತರ 16ನೆ ಶತಮಾನದಲ್ಲಿ ಟೀ ಯೂರೋಪಿಗೆ ಬಂತು. ಆಗ ಅದನ್ನು ಪಾನೀಯಕ್ಕಿಂತ ಹೆಚ್ಚಾಗಿ ಔಷಧ ಅಂತ ಕುಡೀತಿದ್ದರು."

ರೈಲು ಕಟಕಟಕಟ ಶಬ್ದ ಮಾಡುತ್ತ ಮರಿಯಾನಿ ಜಂಕ್ಷನ್‌ಗೆ ಬಂತು. ಇಬ್ಬರು ಬಾಲಕರೂ

ತಮ್ಮ ಸಾಮಾನುಗಳನ್ನು ಎತ್ತಿಕೊಂಡು ಪ್ಲಾಟ್‌ಫಾರಂನಲ್ಲಿ ಜನರ ಮಧ್ಯೆ ನಡೆದರು.

ಪ್ರಾಂಜಲ್‌ನ ತಂದೆ-ತಾಯಿ ಅವರಿಗಾಗಿ ಕಾಯುತ್ತಿದ್ದರು. ಅವನ ಸೋದರಿ ಅಲಕಾ ಮತ್ತು ಮನೆಯ ಮುದ್ದುನಾಯಿ ಟ್ರ್ಯಾಫಿ ಕೂಡ.

ಕೆಲವೇ ನಿಮಿಷಗಳಲ್ಲಿ ಅವರೆಲ್ಲ ದೆಕಿಯಬಾರಿ ಕಡೆಗೆ ಕಾರಿನಲ್ಲಿ ಹೋಗುತ್ತಿದ್ದರು. ಪ್ರಾಂಜಲ್‌ನ ತಂದೆ ನೋಡಿಕೊಳ್ಳುತ್ತಿದ್ದ ಟೀ ತೋಟ ಇದ್ದುದು ಅಲ್ಲೇ.

ಸುಮಾರು ಒಂದು ಗಂಟೆಯ ನಂತರ ಕಾರು ಮುಖ್ಯರಸ್ತೆ ಬಿಟ್ಟು ಅಡ್ಡರಸ್ತೆಗೆ ತಿರುಗಿತು. ದನಗಳು ನಡೆಯುವ ಸೇತುವೆಯೊಂದನ್ನು ಹಾದು ಅವರು ದೆಕಿಯ ಟೀ ತೋಟವನ್ನು ಪ್ರವೇಶಿಸಿದರು.

ಜಲ್ಲಿ ರಸ್ತೆಯ ಎರಡೂ ಕಡೆ ಸಾವಿರಾರು ಎಕರೆಗಳಲ್ಲಿ ಅಚ್ಚುಕಟ್ಟಾಗಿ ಒಂದೇ ಎತ್ತರಕ್ಕೆ ಕತ್ತರಿಸಿದ್ದ ಚಹಾ ಪೊದರುಗಳು. ಮುಂದೆ ಪ್ಲಾಸ್ಟಿಕ್ ಪಾವುಡ ಧರಿಸಿದ್ದ ಹೆಂಗಸರ ಗುಂಪುಗಳು. ಅವರೆಲ್ಲಾ ಹೊಸದಾಗಿ ಚಿಗುರಿದ್ದ ಟೀ ಎಲೆಗಳನ್ನು ಕೀಳುತ್ತಿದ್ದರು. ಕಿತ್ತ ಎಲೆ ಹಾಕಲು ಬೆನ್ನಮೇಲೆ ಬಿದಿರಿನ ಬುಟ್ಟಿಗಳು.

ಎದುರಿಗೆ ಒಂದು ಟ್ರ್ಯಾಕ್ಟರ್ ಬಂದಿತು. ಅದರ ಹಿಂಬಂಡಿಯಲ್ಲಿ ಟೀ ಎಲೆಗಳು ಭರ್ತಿಯಾಗಿ ದ್ದುವು. ಟ್ರ್ಯಾಕ್ಟರ್ ಹೋಗಲು ಜಾಗ ಕೊಡುವುದಕ್ಕಾಗಿ ಪ್ರಾಂಜಲ್ ತಂದೆ ಕಾರನ್ನು ನಿಧಾನ ಮಾಡಿದರು.

"ಬರುವಾ ಮಾಮಾ, ಇದು ಎರಡನೆ ಚಿಗುರಿನ ಕಾಲ ಅಲ್ಲವಾ?" ರಾಜವೀರ್ ಕೇಳಿದ. "ಮೇ ತಿಂಗಳಿಂದ ಜುಲೈ ವರೆಗೆ ಇರುವ ಈ ಕಾಲದಲ್ಲಿ ತುಂಬ ಒಳ್ಳೆಯ ಟೀ ಎಲೆ ಸಿಗುತ್ತದಂತೆ."

"ಓಹೊ, ಇಲ್ಲಿಗೆ ಬರೋದಕ್ಕಿಂತ ಮುಂಚೆಯೇ ತುಂಬ ಓದಿಕೊಂಡು ತಯಾರಾಗಿ ಬಂದಿರೋ ಹಾಗಿದೆ!" ಪ್ರಾಂಜಲ್‌ನ ತಂದೆ ಆಶ್ಚರ್ಯದಿಂದ ಕೇಳಿದರು.

"ಹೌದು , ಮಾಮಾ, ಆದರೆ ಇಲ್ಲಿರೋವಾಗ ಇನ್ನೂ ಹೆಚ್ಚು ತಿಳ್ಕೊಬೇಕು."

"ಹಾ, ಮಧ್ಯಾಹ್ನ ನಿಮ್ಮನ್ನು ತೋಟದಲ್ಲಿ ಸುತ್ತಾಡಿಸಿ ಚಹಾ ಬೆಳೆಯುವುದು ಹೇಗೆ ಅಂತ ತೋರಿಸ್ತೀನಿ."

ಗೇಟ್ ಮೂಲಕ ಹಾದು ಮ್ಯಾನೇಜರ್ ಅವರ ಬಂಗಲೆ ಬಾಗಿಲಿಗೆ ಬಂದು ನಿಂತಿತು ಕಾರು. ವಿಶಾಲವಾಗಿ ಹರಡಿಕೊಂಡ ಮಹಡಿ ಮನೆ. ಐವತ್ತು ವರ್ಷಕ್ಕೂ ಮುಂಚೆ ಇಂಗ್ಲೆಂಡಿನ ಪ್ಲಾಂಟರ್ ಒಬ್ಬರು ಕಟ್ಟಿಸಿದ್ದುದು. ಮನೆಯ ಹೊರಾವರಣದ ಸುತ್ತಲೂ ಕುಳ್ಳಾದ ಬಿದಿರ ಗಿಡಗಳ ಬೇಲಿಯಿತ್ತು. ಮನೆಯ ಮುಂದೆ ಹಸಿರು ಬಣ್ಣದ ನೆಲಗಂಬಳಿಯಂತೆ ಹುಲ್ಲು ಬಯಲು. ಮನೆ ಸುತ್ತಲಿನ ತೋಟದಲ್ಲೆಲ್ಲಾ ಅರಳಿದ ಹೂವುಗಳ ಕೆಂಪು, ನೀಲಿ, ಹಳದಿ ವರ್ಣಗಳ ವೈಭವ.

ಚೆಡ್ಡಿ, ಬನೀನು ಹಾಕಿದ್ದ ತುಂಟ ಮುಖದ ಕಪ್ಪು ಹುಡುಗ ವರಾಂಡದ ಮೆಟ್ಟಿಲ ಮೇಲೆ ಕೂತಿದ್ದ. ಪ್ರಾಂಜಲ್ ಕಣ್ಣಿಗೆ ಬಿದ್ದಂತೆ ಅವನು ಬಾಯಿರಳಿಸಿ ನಗುಬೀರಿದ.

"ಏಯ್, ಮೋಂಗ್ಲ," ಪ್ರಾಂಜಲ್ ಕೂಗಿದ. "ನೋಡು ಇಲ್ಲಿ ನನ್ನ ಸ್ನೇಹಿತ ರಾಜವೀರ್ ಬಂದಿದ್ದಾನೆ."

ಮೋಂಗ್ಲ ಓಡುತ್ತ ಬಂದು ಅಗಲವಾದ ನಗುವಿನೊಡನೆ ರಾಜವೀರ್‌ನ ಕೈಹಿಡಿದು ಕುಲುಕಿದ.

"ಅವನು ಇಲ್ಲಿ ಕಾರ್ಖಾನೆ ಕಾವಲುಗಾರ ಬಿರ್ಜಿಯ ಮಗ. ನಾವಿಬ್ಬರೂ ತುಂಬ ಆಟ ವಾಡ್ತೇವೆ. ಅವನು ಕವಣೆ ಬೀರೋದರಲ್ಲಿ ತುಂಬ ನಿಪುಣ. ಹಾಗೇ ಮೀನು ಹಿಡಿಯುವುದರಲ್ಲೂ ನಿಪುಣ."

"ನಾನೀಗ ಹೋಗಬೇಕು," ಮೋಂಗ್ಲ ಹೇಳಿದ. "ಔಷಧಿ ಎರಚೋ ಗುಂಪಿನಲ್ಲಿ ಕೆಲಸ ಮಾಡ್ತಿದ್ದೀನಿ. ನಿನ್ನ ನೋಡ್ಬಿಟ್ಟು ಹೋಗೋಣಾಂತ ಓಡಿಬಂದೆ. ಮೇಸ್ತ್ರಿಗೆ ಗೊತ್ತಾದರೆ ತಿಂದು ಬಿಡ್ತಾನೆ."

ಸಂತೋಷದಿಂದ ಕೈಬೀಸುತ್ತಾ ಮೋಂಗ್ಲ ಮಾಯವಾದ.



## 2

ಬರುವಾ ಅವರು ಮಧ್ಯಾಹ್ನ ಟೀ ತೋಟ ತೋರಿಸಲು ರಾಜವೀರ್‌ನನ್ನು ಕರೆಯೊಯ್ದರು. ಪ್ರಾಂಜಲ್, ಅಲಕಾ ಮತ್ತು ಟ್ಯಾಫಿ ಜೊತೆಗಿದ್ದರು. ದೆಕಿಯಬಾರಿ 800 ಎಕರೆಗಿಂತ ಹೆಚ್ಚು ವಿಸ್ತಾರವಾದ ದೊಡ್ಡ ತೋಟ. ಆದ್ದರಿಂದ ಅವರೆಲ್ಲ ಬರುವಾ ಜೀಪ್‌ನಲ್ಲಿ ಹೊರಟಿದ್ದರು.

"ಚಹಾ ಸಸಿಗಳಿರುವ ಬಟ್ಟಲು ಪಾತಿ ಬಳಿ ಮೊದಲು ಹೋಗೋಣ," ಎಂದರು ಬರುವಾ.

ಹೋಗುತ್ತ ದಾರಿಯಲ್ಲಿ ಅವರು ಹೇಳಿದರು — "ಚಹಾ ಗಿಡಗಳನ್ನು ತುಂಬ ಹುಷಾರಾಗಿ ನೋಡಿಕೊಳ್ಳಬೇಕು. ಸಾರಜನಕ, ಪೊಟ್ಯಾಷ್ ಮತ್ತು ರಂಜಕದ ರಸಗೊಬ್ಬರಗಳನ್ನು ಭೂಮಿಗೆ ಕ್ರಮವಾಗಿ ಹಾಕುತ್ತಿರಬೇಕು. ಆಗ ಗಿಡಗಳು ಬಲವಾಗಿ, ಆರೋಗ್ಯವಾಗಿರುತ್ತವೆ."

"ಅವುಗಳ ಪೈಕಿ ಸಾರಜನಕ ಬಹಳ ಮುಖ್ಯ. ಟೀ ಗಿಡಗಳಲ್ಲಿ ಬೇರೆ ಗಿಡಗಳ ಹಾಗೆ ಹಣ್ಣು ಕೀಳಲ್ಲ; ಎಲೆಗಳನ್ನೇ ಕೀಳುತ್ತೇವೆ. ಸಸಿಗಳಿಗೆ ಆಹಾರ ಕೊಡೋ ಅಡಿಗೆಮನೆ ಇದ್ದ ಹಾಗಲ್ಲವೇ ಎಲೆಗಳು? ಅದಕ್ಕೇ ಗಿಡ ಬೆಳೀಬೇಕಾದರೆ ಸಾರಜನಕವನ್ನು ತಪ್ಪಿಸದೆ ಕೊಡ್ತಾ ಇರಬೇಕು."

ಮತ್ತೆ ಹೇಳಿದರು — "ಕೆಲವು ಸಲ ಗಿಡಗಳಿಗೆ ಖಾಯಿಲೆಯಾಗುತ್ತೆ, ಗೊತ್ತಲ್ಲ. ಕೆಂಬೂಷ್ಟು, ಬೊಬ್ಬೆ ರೋಗ, ಕಪ್ಪುತೊಳೆ ರೋಗ - ಇವೆಲ್ಲ ಬರುತ್ತವೆ. ಆಗ ನಾವು ಡಾಕ್ಟರ್‌ಗಳ ಹಾಗೆ ರೋಗ ಯಾವುದು ಅಂತ ಪತ್ತೆಮಾಡಿ, ಸರಿಯಾದ ಔಷಧಿ ಕೊಡಬೇಕು."

ಬರುವಾ ಅವರು ಕರೆದುಕೊಂಡು ಹೋದ ಬಟ್ಟಲುಪಾತಿ ಅಥವಾ ನಾಟಿಮಡಿ ತಗ್ಗು ಛಾವಣಿಯ, ಬಿದಿರು ಗೋಡೆಗಳ ವಿಶಾಲ ಹಜಾರದಂತಿತ್ತು. ಛಾವಣಿಯ ಬೊಂಬುಗಳು ಒತ್ತಾಗಿರದೆ ವಿರಳವಾಗಿದ್ದುವು. ಹಜಾರದಲ್ಲಿ ಒಂದು ಭಾಗದ ನೆಲವೆಲ್ಲ ಸಣ್ಣ ಪಾತಿಗಳು. ಇನ್ನೊಂದು ಭಾಗದಲ್ಲಿ ಸಾವಿರಾರು ಪಾಲಿಥೀನ್ ಚೀಲಗಳು. ಒಂದೊಂದರಲ್ಲೂ ಒಂದು ಚಹಾ ಸಸಿ.

ನಾಟಿ ಕುಡಿ ಎಂದರೆ ಒಂದೇ ಎಲೆಯಿರುವಂತೆ ಗೆಣ್ಣಿನ ಸಮೇತ ಕತ್ತರಿಸಿ ತೆಗೆದ ಒಂದಂಗುಲ ಉದ್ದದ ಕಾಂಡದ ತುಂಡು. ಕುಡಿಗಳನ್ನು ತೆಗೆಯಲು ತಾಯಿ ಗಿಡಗಳನ್ನು ಆರಿಸಿಕೊಂಡು ಚೆನ್ನಾಗಿ ಬೆಳೆಸುತ್ತಿದ್ದರು. ಹೊಸಮಣ್ಣು ಹಾಕಿದ ಪಾತಿಗಳಲ್ಲೋ ಪಾಲಿಥೀನ್ ಚೀಲಗಳಲ್ಲೋ ಅವುಗಳನ್ನು ನೆಟ್ಟರೆ ಹತ್ತು ವಾರಗಳಲ್ಲಿ ಬೇರು ಬಿಡುತ್ತಿದ್ದುವು. ವರ್ಷದ ನಂತರ ಸಸಿಗಳಿಗೆ ತೋಟದಲ್ಲಿ ಜಾಗ.



"ಬೀಜ ಬೆಳೆಸುವ ಕ್ಷೇತ್ರಗಳೂ ಇವೆ," ಬರುವಾ ಹೇಳಿದರು. "ಆದರೆ ಪ್ಲಾಂಟರುಗಳು ಈಚೆಗೆಲ್ಲ ನಾಟಿ ವಿಧಾನವನ್ನೇ ಬಳಸುತ್ತಾರೆ. ಈ ವಿಧಾನದಲ್ಲಿ ಬೇರೆ ಗಿಡದ ಪರಾಗಸ್ಪರ್ಶ ಇಲ್ಲದಿರುವುದರಿಂದ ತಳಿ ಗುಣವನ್ನು ಕಾಪಾಡಬಹುದು. ನಾಟಿ ವಿಧಾನದಿಂದ ಬೆಳೆಸಿದ ಪ್ರತಿಯೊಂದು ಟೀ ಸಸಿಯಲ್ಲೂ ತಾಯಿ ಗಿಡದ ಲಕ್ಷಣಗಳೇ ಇರುತ್ತವೆ."

"ಹಾಗಾದರೆ ಬಿತ್ತನೆ ಬೀಜಗಳನ್ನು ಬಳಸುವುದೇ ಬೇಕಿಲ್ಲವಲ್ಲ?" ರಾಜವೀರ್ ಕೇಳಿದ.

"ಆದರೆ ನಮ್ಮ ಹತೋಟಿಯಲ್ಲಿ ಅನ್ಯ ಗಿಡಗಳಿಂದ ಪರಾಗಸ್ಪರ್ಶ ಮಾಡಿಸಿ ಇನ್ನೂ

ಉತ್ತಮವಾದ ಮಿಶ್ರಜಾತಿಗಳನ್ನು ಬೆಳೆಸಲು ಬೀಜಗಳು ಬೇಕಾಗುತ್ತವೆ. ಅಲ್ಲದೆ ಬೀಜಗಳು ಅಗ್ಗ. ನಾಟಿ ಸಸಿಗಳನ್ನು ನೋಡಿಕೊಳ್ಳೋ ಅಷ್ಟು ಹುಷಾರು ಬೇಕಿಲ್ಲ ಇವಕ್ಕೆ."

"ಮಾಮಾ, ಒಂದು ಸಸಿ ಬೆಳೆದು ದೊಡ್ಡ ಚಹಾ ಗಿಡ ಆಗಬೇಕಾದರೆ ಎಷ್ಟು ಕಾಲ ಬೇಕು?"

"ಮೊದಲ ವರ್ಷದಿಂದಲೇ ಎಲೆ ಕೀಳಬಹುದು. ಆದರೆ ಗಿಡ ಪೂರ್ತಿ ಬೆಳೆಯಲು ಐದು ವರ್ಷ ಬೇಕು. ಟೀಗಿಡದ ಜೀವನದ ಕಾಲ ಸುಮಾರಾಗಿ ಒಬ್ಬ ಮನುಷ್ಯನ ಜೀವನದ ಕಾಲದಷ್ಟೇ — ಸುಮಾರು 60 ವರ್ಷ."

ಎಲ್ಲರೂ ವಾಪಸ್ಸು ಬಂದು ಜೀಪಿನಲ್ಲಿ ಕುಳಿತರು. ತೋಟಗಳಲ್ಲಿನ ಇಕ್ಕಟ್ಟಾದ ದಾರಿಗಳಲ್ಲಿ ಬರುವಾ ಜೀಪನ್ನು ಓಡಿಸಿದರು.



ಅಲ್ಲೊಂದು ಕಡೆ ಕೆಲವರು ಗಿಡಗಳ ಮೇಲೆ ರಾಸಾಯನಿಕ ವಸ್ತುಗಳನ್ನು ಸಿಂಪಡಿಸುತ್ತಿದ್ದರು. ಅಲ್ಲಿದ್ದ ಮೋಂಗ್ಲ ಕೈಬೀಸಿದ.

"ಬನ್ನಿ, ಇಲ್ಲಿ ಇಳಿಯೋಣ," ಎಂದು ಹೇಳುತ್ತ ಬರುವಾ ಜೀಪನ್ನು ನಿಲ್ಲಿಸಿದರು.

ಟೀ ಪೊದರುಗಳ ಹತ್ತಿರ ಹೋಗಲು ಅವರು ಒಂದು ಆಳವಾದ ಹಳ್ಳವನ್ನು ದಾಟಬೇಕಾಗಿತ್ತು. ಅಡಿಕೆ ಮರದ ತಾಳೊಂದು ಇಕ್ಕಟ್ಟಿನ ಸೇತುವೆಯಾಗಿತ್ತು. ಅದರ ಮೇಲೆ ನಡೆದು ದಾಟುವುದು ಉಳಿದವರಿಗೆ ತೊಂದರೆಯಾಗದಿದ್ದರೂ ರಾಜವೀರ್‌ನಿಗೆ ಕಷ್ಟವಾಯಿತು. ಅವನು ನಿಧಾನವಾಗಿ ಕೆಲವು ಹೆಜ್ಜೆಗಳನ್ನು ಹಾಕಿ ಮಧ್ಯಕ್ಕೆ ಬಂದಾಗ ತಡವರಿಸುವಂತಾಯಿತು. ಸರ್ಕಸ್‌ನಲ್ಲಿ ಹಗ್ಗದ ಮೇಲೆ ನಡೆಯುವವರಂತೆ ಅತ್ತಿಂದಿತ್ತ ತುಯ್ದಾಡಿದ. ಇನ್ನೇನು ಬಿದ್ದುಬಿಡುತ್ತಾನೆಯೋ ಅನ್ನಿಸಿತು. ಆದರೆ ಅನಂತರ ನೆಟ್ಟಗಾಗಿ ಬೇಗ ಬೇಗ ಹೆಜ್ಜೆ ಹಾಕಿ ದಾಟಿಬಿಟ್ಟ.

ಅವನು ಯಶಸ್ವಿಯಾಗಿ ದಾಟಿದ್ದಕ್ಕಾಗಿ ಎಲ್ಲರೂ ಹರ್ಷದಿಂದ ಕೂಗಿದರು. ಟ್ರ್ಯಾಫಿ ಕೂಡಾ ಗಟ್ಟಿಯಾಗಿ ಬಗುಳಿ ತನ್ನ ಮೆಚ್ಚುಗೆ ತೋರಿಸಿತು.

"ಒಳ್ಳೇ ಹಳ್ಳಗಳಾದುವಲ್ಲ!" ರಾಜವೀರ್ ಉದ್ಗರಿಸಿದ. "ಅವೂ, ಎಷ್ಟೊಂದಿವೆ! ಇಡೀ ತೋಟದ ತುಂಬ ಅಡ್ಡಡ್ಡಲಾಗಿ ಹರಿದಿರುವ ಹಳ್ಳಗಳೇ."

"ಅವು ತೋಟದಲ್ಲಿ ನೀರಿನ ಚರಂಡಿ ವ್ಯವಸ್ಥೆಯಿದ್ದಂತೆ," ಬರುವಾ ಹೇಳಿದರು. "ತುಂಬ ಹೆಚ್ಚಲ್ಲದೆ ಸಾಧಾರಣವಾಗಿ ಮಳೆ ಬಿದ್ದು ತೇವವುಳ್ಳ ಉಷ್ಣದ ವಾಯುಗುಣದಲ್ಲಿ ಚಹ ತುಂಬ ಚೆನ್ನಾಗಿ ಬೆಳೆಯುತ್ತದೆ. ಆದರೆ ಮಳೆಯ ನೀರು ನಿಂತುಬಿಟ್ಟರೆ ಬೇರುಗಳು ಕೊಳೆತು ಗಿಡಗಳು ಹೋಗಿಬಿಡುತ್ತವೆ. ಈ ಹಳ್ಳಗಳು ನೀರು ನಿಲ್ಲುವುದನ್ನು ತಪ್ಪಿಸುತ್ತವೆ."

ಅವರೆಲ್ಲ ಔಷಧವನ್ನು ಸಿಂಪಡಿಸುತ್ತಿದ್ದ ಗುಂಪಿನ ಬಳಿ ಬಂದರು. ಗುಂಪಿನ ಪ್ರತಿಯೊಬ್ಬನ ಬೆನ್ನಮೇಲೂ ತುಂತುರು ಯಂತ್ರವನ್ನು ಕಟ್ಟಿದ್ದರು. ಆ ಪಂಪಿನ ಮೂಟುಗೋಲನ್ನು ಅವರು ಮೇಲಕ್ಕೆ ಕೆಳಕ್ಕೆ ಆಡಿಸುತ್ತಾ ರಾಸಾಯನಿಕವನ್ನು ನೆಲದ ಮೇಲಕ್ಕೆ ಬೀಳಿಸುತ್ತಿದ್ದರು.

"ಕಳೆನಾಶಕ ಔಷಧವನ್ನು ಎರಚುತ್ತಿದ್ದಾರೆ," ಬರುವಾ ವಿವರಿಸಿದರು. "ಅದು ಹುಳು ಕೊಲ್ಲುವ ಕೀಟನಾಶಕವಾಗಿದ್ದರೆ ಔಷಧವನ್ನು ಪೊದರುಗಳ ಮೇಲೆಯೇ ಬೀಳಿಸುತ್ತಿದ್ದರು. ಮಿಕೇನಿಯ, ಬಗ್ರಕೋಟ್, ಜೊಂಡುಹುಲ್ಲು ಮುಂತಾದ ಕಳೆಗಳು ಟೀ ಗಿಡದ ಬೆಳವಣಿಗೆಯನ್ನು ತಡೆಯುತ್ತವೆ."

"ಕೀಟನಾಶಕ ಅಂದಿರಿ. ಟೀ ಗಿಡಕ್ಕೆ ಕೀಟಗಳು ಬೀಳುತ್ತವಾ?" ರಾಜವೀರ್ ಕೇಳಿದ.





"ಹೌದು ಹೌದು, ಕುಣಿಕೆ ಹುಳು, ಗಿಡಹೇನು, ಥ್ರಿಪ್ ಹುಳು, ತುರುಚಿ ಹುಳು ಇವೆಲ್ಲ ತುಂಬ ಹಾಳು ಮಾಡುತ್ತವೆ."

ಮೋಂಗ್ಲ ಅವರ ಬಳಿಗೆ ಓಡಿಬಂದ. ಮುಖದ ಮೇಲೆ ಎಂದಿನಂತೆ ಹಲ್ಲೆಲ್ಲ ಕಾಣುವ ನಗೆ.

"ನಾಳೆ ನದಿಯಲ್ಲಿ ಈಜಲು ಹೋಗುತ್ತೇವೆ," ಪ್ರಾಂಜಲ್ ಅವನಿಗೆ ಹೇಳಿದ. "ನೀನೂ ಬರುತ್ತೀಯಾ?"

"ಖಂಡಿತ," ಮೋಂಗ್ಲ ಒಪ್ಪಿದ. "ಯಾವಾಗ?"

"ಮಧ್ಯಾಹ್ನ. ರಾಜವೀರ್‌ನನ್ನು ತಂದೆಯವರು ಬೆಳಿಗ್ಗೆ ಫ್ಯಾಕ್ಟರಿಗೆ ಕರಕೊಂಡು ಹೋಗ್ತಾರೆ."

"ಹಾಗೆ ಆಗಲಿ." ಮೋಂಗ್ಲ ಹೇಳಿದ. "ಈಜಿದ ಮೇಲೆ ಒಂದಷ್ಟು ಮೀನು ಹಿಡೀಬಹುದು, ಅಲ್ಲವಾ? ಕೆಲವು ಮೀನು ಗಾಳಗಳನ್ನು ಮಾಡಿದ್ದೇನೆ. ಸರಿಯಾಗಿವೆಯೋ ನೋಡಬೇಕು."

ಕೆಂಪು ಕೊಕ್ಕಿನ ಗಿಳಿಗಳ ಗುಂಪು ಚೀರುತ್ತಾ ಮೇಲೆ ಹಾರಿಹೋಗಿ ದೊಡ್ಡಮರದ ಮೇಲೆ ಗದ್ದಲ ಮಾಡುತ್ತಾ ಕೂತವು. ಇನ್ನೆರಡು ಹದ್ದುಗಳ ಜೋಡಿ ಶುಭ್ರವಾದ ಆಕಾಶದಲ್ಲಿ ವರ್ತುಲವಾಗಿ ಸುತ್ತುತ್ತಿದ್ದುವು. ದೂರದಲ್ಲಿ ಒಂದು ಬಿಳಿ ಹೆರಾನ್ ಹಕ್ಕಿ ರೆಕ್ಕೆಗಳನ್ನು ಬೀಸುತ್ತ ಗೂಡಿನೆಡೆಗೆ ಹಾರುತ್ತಿತ್ತು.



# 3

ಅವರು ಮೋಂಗ್ಲನನ್ನು ಬೀಳ್ಕೊಂಡು ಜೀಪಿನ ಬಳಿಗೆ ವಾಪಸು ಬಂದರು. ಸಂಜೆ ಸೂರ್ಯನ ಓರೆಕಿರಣಗಳು ಎತ್ತರದ ಮರಗಳ ಮೂಲಕ ಹಾದುಬಂದು ಟೀ ಗಿಡಗಳ ಮೇಲೆ ನೆಳಲು ಬೆಳಕುಗಳ ಮೋಹಕ ಚಿತ್ರವನ್ನು ನೇಯ್ದಿದ್ದುವು. ಆ ದೊಡ್ಡ ನೆರಳು ಮರಗಳ ಗಂಭೀರ ಸೌಂದರ್ಯ ಎಷ್ಟು ಚೆನ್ನಾಗಿದೆ ಎಂದ ರಾಜವೀರ್.

"ಅವುಗಳಿಂದ ತುಂಬ ಉಪಯೋಗವೂ ಇದೆ," ಬರುವಾ ಅವರು ಹೇಳಿದರು. "ಅವು ಸೂರ್ಯನ ಬಿಸಿಲನ್ನು ತಗ್ಗಿಸಿ ಚಹಾ ಗಿಡಗಳ ಎಲೆಗಳ ಉಷ್ಣತೆ ಸರಿಯಾದ ಮಟ್ಟದಲ್ಲಿ ಇರುವಂತೆ ಮಾಡುತ್ತವೆ. ಅದು ಯಾವಾಗಲೂ 25 ರಿಂದ 35 ಡಿಗ್ರಿ ಸೆಲ್ಸಿಯಸ್ ವರೆಗೇ ಇರಬೇಕು. ಬೇಸಗೆಯ ಸುಡು ಬಿಸಿಲು ಚಹಾ ಗಿಡಗಳ ಮೇಲೆ ನೇರವಾಗಿ ಬಿದ್ದರೆ ಎಲೆಗಳ ಉಷ್ಣಾಂಶ 40 ಡಿಗ್ರಿ ಸೆಲ್ಸಿಯಸ್‌ಗಿಂತ ಹೆಚ್ಚಾಗಿ ಎಲೆಗಳೆಲ್ಲ ಸುಟ್ಟು ಕಪ್ಪಾಗಿ ಬಿಡುತ್ತವೆ."

"ಆದರೆ, ಮಾಮಾ, ಗಿಡಗಳು ಬೆಳೆಯಬೇಕಾದರೆ ಬಿಸಿಲು ಬೇಕೇಬೇಕಲ್ಲವೇ?" ರಾಜವೀರ್ ಕೇಳಿದ.

"ಹೌದು. ಆದರೆ ಶಾಖ ತೀರ ಹೆಚ್ಚಾದರೆ ಗಿಡಗಳು ಸಾಯುತ್ತವೆ. ನೆರಳು ಕೊಡುವ ಮರಗಳನ್ನು ಉತ್ತರ-ದಕ್ಷಿಣವಾಗಿ ಸಾಲು ಸಾಲುಗಳಲ್ಲಿ ಬೆಳೆಸುತ್ತೇವೆ. ಸೂರ್ಯ ಪೂರ್ವದಲ್ಲಿ ಹುಟ್ಟಿದಾಗ ಮರಗಳ ಪಶ್ಚಿಮಕ್ಕಿರುವ ಟೀ ಗಿಡಗಳಿಗೆಲ್ಲ ನೆರಳಾಗಿರುತ್ತದೆ. ಮಧ್ಯಾಹ್ನದ ವೇಳೆ ಮರಗಳ ಪೂರ್ವಕ್ಕಿರುವ ಗಿಡಗಳಿಗೆಲ್ಲ ನೆರಳು. ಹಾಗೆ ಬಿಸಿಲು ಸಮನಾಗಿ ಹಂಚಿ ಹೋಗುತ್ತದೆ. ಜೊತೆಗೆ ಈ ಮರಗಳು ಕೆಲಸದವರಿಗೂ ನೆರಳು ಕೊಡುತ್ತವೆ."

"ಆದರೆ ಚಳಿಗಾಲದಲ್ಲಿ ಹೇಗೆ?" ರಾಜವೀರ್ ಮತ್ತೆ ಪ್ರಶ್ನಿಸಿದ. "ಆಗ ಈ ಮರಗಳು ಸ್ವಲ್ಪ ಮಾತ್ರ ಇರೋ ಬಿಸಿಲನ್ನು ತಪ್ಪಿಸಿಯೇ ಬಿಡುತ್ತವಲ್ಲ!"

"ಹಾಗಾಗಲ್ಲ, ಈ ನೆರಳ ಮರಗಳನ್ನು ತುಂಬ ಎಚ್ಚರಿಕೆಯಿಂದ ಆರಿಸಿಕೋಳ್ತೇವೆ - ಈಗ ನೋಡು, ಇವು 'ಅಲ್ಬಿಜಿಯ ಓಡೊರಟಿಸಿಮ' ಅನ್ನೋ ಹೆಸರಿನ ಮರಗಳು. ಅವು ಅಕ್ಟೋಬರ್ ತಿಂಗಳ ಸುಮಾರಿಗೆ ಚಳಿಗಾಲ ಪ್ರಾರಂಭವಾಗುತ್ತಿರುವಾಗ ತಮ್ಮ ಎಲೆಗಳನ್ನು ಉದುರಿಸುತ್ತವೆ. ಆಮೇಲೆ ಮಾರ್ಚಿ ತಿಂಗಳಲ್ಲಿ ಮರಗಳಲ್ಲಿ ಹೊಸ ಎಲೆಗಳು ಬೆಳೆಯುವುದರಿಂದ ಬೇಸಿಗೆಯ ತಾಪದಲ್ಲಿ ನೆರಳು ಸಿಕ್ಕುತ್ತದೆ."

ರಾಜವೀರ್‌ಗೆ ಸಮಾಧಾನವಾದಂತಿರಲಿಲ್ಲ. ಮತ್ತೆ ಕೇಳಿದ — "ಅವು ಅಷ್ಟು ದೊಡ್ಡ ಮರಗಳು. ಭೂಮಿಯ ಸಾರವನ್ನೆಲ್ಲ ಅವು ಹಾಳು ಮಾಡುವುದಿಲ್ಲವೇ?"

"ಹಾಗಲ್ಲ. ಅದರ ಬದಲು ಅವು ಸಾರಜನಕವನ್ನು ಒದಗಿಸುವುದರಿಂದ ಭೂ ಸಾರವನ್ನು ಹೆಚ್ಚಿಸುತ್ತವೆ. ಅವು ಉದುರಿಸುವ ಎಲೆಗಳು ಕೊಳೆತಾಗ ನೆಲಕ್ಕೆ ಗೊಬ್ಬರವಾಗುತ್ತವೆ. ಟೀ ತೋಟದಲ್ಲಿ ಪ್ರತಿಯೊಂದಕ್ಕೂ ಉಪಯೋಗವಿದೆ. ಉದ್ದೇಶವಿಲ್ಲದೆ ಏನನ್ನು ಮಾಡುವುದಿಲ್ಲ. ಆಯಿತು, ಇವತ್ತಿಗೆ ಸಾಕು. ಮನೆಗೆ ಹೋಗಿ ಒಂದು ಕಪ್..."

"ಚಹಾ ಕುಡಿಯೋಣ!" ಪ್ರಾಂಜಲ್ ಸೇರಿಸಿದ. ಎಲ್ಲರೂ ಘೊಳ್ಳೆಂದು ನಕ್ಕರು.

* * *

ರಾತ್ರಿಯಾಗುತ್ತಿದ್ದಂತೆ ಮಕ್ಕಳೆಲ್ಲ ಮಹಡಿಯ ಮೇಲೆ ವರಾಂಡದಲ್ಲಿ ಕುಳಿತರು. ನೂರಾರು ದೀಪದ ಹುಳುಗಳು ಕತ್ತಲಲ್ಲಿ ಮಿನುಗುತ್ತಿದ್ದವು. ಎಲ್ಲಿಂದಲೋ ಮರಗಳ ಮಧ್ಯದಿಂದ ಗೂಬೆ ಯೊಂದು ಕೂಗುತ್ತಿತ್ತು. ಹತ್ತಿರದ ಬಸ್ತಿಯಿಂದ ಲಯಬದ್ಧವಾದ ಜುಮುರ್ ಹಾಡೊಂದನ್ನು ಮಂದ ಮಾರುತ ತರುತ್ತಿತ್ತು.

ಇದ್ದಕ್ಕಿದ್ದಂತೆ ದೂರದಲ್ಲಿ ವಿಚಿತ್ರ ಬೆಳಕು ರಾಜವೀರ್‌ಗೆ ಕಂಡಿತು. ಅದು ಒಮ್ಮೆ ಹತ್ತಿರ ಬರುತ್ತಾ, ಮತ್ತೆ ದೂರ ಹೋಗುತ್ತಾ, ಕಣ್ಣುಮುಚ್ಚಾಲೆ ಆಡುವಂತಿತ್ತು.

"ಏಯ್, ಅದೇನದು?" ರಾಜವೀರ್ ಗಾಬರಿಯಿಂದ ಕೇಳಿದ.

"ಕೊಳ್ಳಿದೆವ್ವ!" ಪ್ರಾಂಜಲ್ ಕೂಗಿದ.

"ಅಂದ್ರೆ ಜಿಪುಣರಾಗಿದ್ದ ಮುದುಕರು ಸತ್ತಮೇಲೆ ಬಂಗಾರಕ್ಕೆ ಕಾವಲು ಕೂತ ದೆವ್ವಗಳಾಗ್ತಾರೆ. ಅದೇ ಕೊಳ್ಳಿದೆವ್ವ," ಅಲಕಾ ತುಂಬ ಗಂಭೀರವಾಗಿ ಹೇಳಿದಳು.

"ದೆವ್ವಗಳಾ?" ರಾಜವೀರ್ ಭಯದಿಂದ ಕೇಳಿದ.

"ಪೂಹ್!" ಪ್ರಾಂಜಲ್ ತಿರಸ್ಕಾರದಿಂದ ಹೇಳಿದ. "ಜೌಗು ನೆಲದಲ್ಲಿ ಬರೋ ಗಾಳಿಗೆ ಬೆಂಕಿ ಹೊತ್ತಿಕೊಂಡಾಗ ಕೊಳ್ಳಿದೆವ್ವ ಅನುತ್ತಾರೆ." ಆದರೂ ಅವನ ಮಾತು ದೃಢವಾಗಿರಲಿಲ್ಲ.

"ಹುಚ್ಚುಹುಚ್ಚಾಗಿ ಹೇಳಬೇಡ," ಅಲಕಾ ಗದರಿದಳು. "ಮುದುಕಿ ಜಾಲೇಶ್ವರಿ ನನಗೆ ಹೇಳಿದಳು - ಒಂದು ಕೊಳ್ಳಿದೆವ್ವ ಅವಳ ಕಣ್ಣಮುಂದೇನೇ ಮುದುಕನಾಗಿ ನಿಂತುಬಿಡ್ತಂತೆ!"

ಒಂದು ಕ್ಷಣ ಯಾರೂ ಮಾತಾಡದೆ ಎಲ್ಲ ನಿಶ್ಶಬ್ದವಾಗಿತ್ತು. ಆ ಹೊತ್ತಿಗೆ ಪ್ರಾಂಜಲ್‌ನ ತಂದೆತಾಯಿ ಅಲ್ಲಿಗೆ ಬಂದರು.

ಅವರಿಗೆ ರಾಜವೀರ್ ಹೇಳಿದ - "ಟೀ ತೋಟಗಳಲ್ಲಿ ಜೀವನ ತುಂಬ ಶಾಂತವಾಗಿರುತ್ತೆ, ಅಲ್ಲವಾ?"

ಬರುವಾ ಜವಾಬು ಕೊಟ್ಟರು - "ಹಾಗೇನಿಲ್ಲ. ಇಲ್ಲೂ ಅಪಾಯಗಳು ಇದ್ದೇ ಇವೆ. ಉದಾಹರಣೆ ಅಂದ್ರೆ, ನಾಗರಹಾವಿನಂಥ ವಿಷ ಸರ್ಪಗಳಿವೆ. ನಿನಗೆ ಗೊತ್ತಿರಬೇಕು - ಈ ಬ್ರಿಟಿಷರು 19ನೆ ಶತಮಾನದ ಮಧ್ಯಭಾಗದಲ್ಲಿ ಅಸ್ಸಾಂನಲ್ಲಿ ತಾವಾಗಿ ತಾವೇ ಬೆಳೆದಿದ್ದ ಚಹಾ ಗಿಡಗಳನ್ನು ಕಂಡರು. ಆಮೇಲೆ ಟೀ ತೋಟಗಳನ್ನು ಮಾಡಿದರು. ಆಗ ಅವರು ಅನೇಕ



ಬಗೆಯ ಕಾಡು ಪ್ರಾಣಿಗಳು ಮತ್ತು ಪ್ರಕೃತಿಯ ಇತರ ಆಪಾಯಗಳ ಜೊತೆಗೆ ಪ್ಲೇಗ್, ಕಾಲರಗಳಂಥ ಸಾಂಕ್ರಾಮಿಕ ರೋಗಗಳನ್ನು ಎದುರಿಸಬೇಕಾಗಿತ್ತು.ಈಗ ಎಷ್ಟೋ ಮೇಲು. ಆದರೂ ನಮ್ಮ ಪಾಲಿನ ಕೋಲಾಹಲಗಳು ಇದ್ದೇ ಇವೆ."

"ಚಿರತೆ ವಿಷಯ ಹೇಳ್ರೀ," ಶ್ರೀಮತಿ ಬರುವಾ ಸೂಚಿಸಿದರು.

"ಚಿರತೆಯಾ, ಮಾಮಾ?" ರಾಜವೀರ್‌ಗೆ ವಿಷಯ ಕೇಳಲು ತುಂಬ ಸಡಗರ.

ಬರುವಾ ಹೇಳಿದರು - "ಕೆಲವು ಸಲ ಹತ್ತಿರದ ಕಾಡುಗಳಿಂದ ಕ್ರೂರಮೃಗಗಳು ಬಂದು ಬಿಡುತ್ತವೆ. ತೋಟಗಳಲ್ಲೆಲ್ಲಾ ಭಯ ಹಬ್ಬುತ್ತೆ. ಎರಡು ವರ್ಷಗಳ ಹಿಂದೆ ನಾನೇ ಒಂದು ದೊಡ್ಡ ಹುಲಿಯನ್ನು ಕೋವಿಯಿಂದ ಹೊಡೆದು ಕೊಂದು ಹಾಕಿದೆ. ಅದು ಮನುಷ್ಯರನ್ನು ತಿನ್ನಲು ಪ್ರಾರಂಭಿಸಿತ್ತು. ಆಗಾಗ ಕಾಡಾನೆಗಳೂ ಕೂಡ ಬಂದು ಕಂಡದ್ದೆಲ್ಲ ನಾಶಮಾಡಿಬಿಡ್ತವೆ. ಈಗ ಕಳೆದ ಹದಿನೈದು ದಿವಸಗಳಿಂದ ಒಂದು ಚಿರತೆ ನಮ್ಮ ತೋಟದ ಕೆಲಸದವರನ್ನೆಲ್ಲ ಹೆದರಿಸಿಬಿಟ್ಟಿದೆ. ಸಾವನಾ ಅನ್ನೋ ಒಬ್ಬ ಸರ್ದಾರ್ ಹೇಳಿದ - ರಾತ್ರಿ ಚಿರತೆ ಅವನ ಮನೆ ಹತ್ತಿರ ಬಂದು ಒಂದು ಎತ್ತನ್ನೇ ಎಳಕೊಂಡು ಹೋಯಿತಂತೆ."

"ಸರ್ದಾರ್ ಅಂದರೆ ಯಾರು?" ರಾಜವೀರ್ ಕೇಳಿದ.

"ಒಂದೊಂದು ಟೀ ತೋಟ ಅಂದರೂ ತುಂಬ ವಿಶಾಲವಾದ ಪ್ರದೇಶ," ಬರುವಾ ವಿವರಿಸಿದರು. "ಸಾವಿರಾರು ಕೆಲಸಗಾರರಿರುತ್ತಾರೆ. ಅನುಕೂಲಕ್ಕೋಸ್ಕರ ಅದನ್ನು ಕೆಲವು ವಿಭಾಗಗಳಾಗಿ ವಿಂಗಡಿಸಿ ಅವುಗಳಲ್ಲಿ ಕೆಲಸಗಾರರ ತಂಡಗಳಿಗೆ ಒಂದೊಂದು ಕೆಲಸ ನೇಮಿಸಿರ್ತೇವೆ. ಇಂಥ ತಂಡದ ಮುಖಂಡನಿಗೆ ಸರ್ದಾರ್ ಅಂತ ಕರೆಯೋದು. ಟೀಮಿನ ಕ್ಯಾಪ್ಟನ್ ಇದ್ದ ಹಾಗೆ."

"ಚಿರತೇನ ಹಿಡಿಯಕ್ಕೆ ಹೋಗಿಲ್ಲವಾ ಡ್ಯಾಡಿ?" ಪ್ರಾಂಜಲ್‌ನ ಪ್ರಶ್ನೆ.

"ಹೋಗಿದ್ದೆ. ಮೂರುರಾತ್ರಿ ತೋಟದಲ್ಲಿ ಕಾದು ಕೂತೆ. ಚಿರತೆ ಕಾಣಲಿಲ್ಲ. ಅದಕ್ಕೆ ಆಸೆ ತೋರಿಸಲು ಒಂದು ಮೇಕೆ ಕಟ್ಟಿದೆ. ಆದರೆ ಚಿರತೆ ಬರಲಿಲ್ಲ. ಈ ಚಿರತೆಗಳಿಗೆ ತುಂಬ ಬುದ್ಧಿ. ಇದು ಒಂದು ಹೆಜ್ಜೆ ಗುರುತನ್ನು ಬಿಟ್ಟಿಲ್ಲ. ನಮ್ಮ ಕೆಲಸದವರೆಲ್ಲ ಎಷ್ಟು ಹೆದರಿದ್ದಾರೇಂದ್ರೆ ಅವರು ರಾತ್ರಿ ಹೊತ್ತು ಕೆಲಸಕ್ಕೆ ಬರಲ್ಲ ಅಂತಾರೆ."

ರಾಜವೀರ್‌ಗೆ ಇನ್ನೂ ಕೇಳಬೇಕೆಂಬ ಆಸೆ. ಆದರೆ ಊಟದ ಹೊತ್ತಾಯಿತೆಂಬ ಸೂಚನೆ ಬಂತು.

# 4

ಮಾರನೆಯ ಬೆಳಿಗ್ಗೆ ಎಲ್ಲರೂ ಬೇಗ ಉಪಹಾರಕ್ಕೆ ಕೂತರು. "ಇನ್ನು ಸ್ವಲ್ಪ ಹಾಲು ಹಾಕಲೇ, ರಾಜವೀರ್?" ಶ್ರೀಮತಿ ಬರುವಾ ಕೇಳಿದರು.

"ಬೇಡಿ, ಆಂಟಿ. ಚಹಾ ಸ್ವಲ್ಪ ತೀಕ್ಷ್ಣವಾಗಿದ್ದರೆ ಚೆನ್ನ ನನಗೆ."

"ನಿನ್ನ ಮಾಮಾ ಅಂತೂ ಹಾಲೇ ಹಾಕ್ಕೋಳ್ಳೋದಿಲ್ಲ" ಶ್ರೀಮತಿ ಬರುವಾ ಹೇಳಿದರು.

"ಹೌದು. ಟೀ ಹೇಗಿರಬೇಕು ಅನ್ನೋ ವಿಷಯದಲ್ಲಿ ವ್ಯಕ್ತಿಗಳ ಮಧ್ಯೆ ವ್ಯತ್ಯಾಸ ಕಾಣುತ್ತೆ," ಬರುವಾ ತಿಳಿಸಿದರು. "ನಾವು ಟೀ ಕುದಿಸಿ ಹಾಲು, ಸಕ್ಕರೆ ಬೆರೆಸಿ ಕುಡೀತೀವಿ. ಚೀಣದಲ್ಲಿ, ಜಪಾನಿನಲ್ಲಿ ಹಾಗೆ ಕುಡಿಯಲ್ಲ. ಅವರು ಹಸಿರು ಟೀ ಕುಡೀತಾರೆ."

"ಹಸಿರು ಟೀ ಅಂದರೆ?" ರಾಜವೀರ್ ಕೇಳಿದ.

"ಮುಖ್ಯವಾಗಿ ಮೂರು ತರಹ ಟೀ ಇದೆ - ಸಂಪ್ರದಾಯದ್ದು, ಸಿ.ಟಿ.ಸಿ. ಮತ್ತು ಹಸಿರು ಟೀ. ಗಿಡದ ಬೆಳವಣಿಗೆಗೆ ಬೇಕಾದ ಆಹಾರ ಮಾರ್ಪಾಡುಗಳಿಗೆ ಸಹಕಾರಿಯಾದ ರಾಸಾಯನಿಕ ವಸ್ತು ಎಲೆಗಳಲ್ಲಿರುತ್ತವೆ. ಅದಕ್ಕೆ ಕಿಣ್ವ ಅಂತ ಹೆಸರು. ಈ ಎಲೆಗಳಿಗೆ ಬಿಸಿ ಆವಿ ಹಾಯಿಸಿದಾಗ ಕಿಣ್ವಗಳೆಲ್ಲ ಸಾಯುತ್ತದೆ. ಆಮೇಲೆ ಎಲೆಗಳನ್ನು ಒಣಗಿಸುತ್ತಾರೆ. ಕಿಣ್ವ ಇಲ್ಲದ್ದರಿಂದ ಹುದುಗು ಬರಲ್ಲ. ಅದರಿಂದ ಎಲೆಯಲ್ಲಿ ಮೊದಲಿದ್ದ ಅಂಶಗಳು ಹಾಗೇ ಉಳಿಯುತ್ತವೆ. ಇದನ್ನೇ ಹಸಿರು ಟೀ ಅನ್ನುವುದು. ಚೀಣೀಯರೂ ಜಪಾನೀಯರೂ ಹಸಿರು ಟೀಯನ್ನು ಕುದಿಸಿ ಹಾಲು, ಸಕ್ಕರೆ ಬೆರೆಸದೆ ಕುಡೀತಾರೆ. ಕೆಲವು ಸಲ ಪರಿಮಳ ಮತ್ತು ರುಚಿಗಾಗಿ ಜಾಜಿಮೊಗ್ಗುಗಳನ್ನು ಸೇರಿಸುತ್ತಾರೆ. ಜಪಾನಿನಲ್ಲಿ ಚಹಾ ಸೇವನೆಯನ್ನು ಒಂದು ದೊಡ್ಡ ವಿಧಿ ಅಥವಾ ಸಂಪ್ರದಾಯ ಮಾಡಿಕೊಂಡಿದ್ದಾರೆ. ಅದು ಅವರ ಬದುಕು ಮತ್ತು ಸಂಸ್ಕೃತಿ ಮೇಲೆ ಬಹಳ ಪ್ರಭಾವ ಬೀರಿದೆ.

"ಈಚೆಗೆ ಧಿಡೀರ್ ಟೀ ಅಂತ ಬಂದಿದೆ, ಅಲ್ಲವಾ ಡ್ಯಾಡಿ?" ಅಲಕಾ ಕೇಳಿದಳು.

"ಹಾ, ಧಿಡೀರ್ ಕಾಫಿ ಇರೋ ಹಾಗೆ," ಬರುವಾ ನುಡಿದರು. ಒಂದು ಚಹಾ ಚೀಲವನ್ನು ಒಂದು ಬಟ್ಟಲು ಬಿಸಿ ನೀರಿನಲ್ಲಿ ಅದ್ದಿದರೆ ಸಾಕು. ಇಂಗಾಲಯುಕ್ತ ಚಹಾವನ್ನು ಸೀಸೆಗಳಲ್ಲಿ ಒದಗಿಸುವ ವಿಧಾನವನ್ನೂ ಈಗ ಟೀ ವಿಜ್ಞಾನಿಗಳು ಕಂಡುಹಿಡಿದಿದ್ದಾರೆ. ಬಗೆಬಗೆಯ ತಂಪು ಪಾನೀಯಗಳನ್ನು ಕುಡಿಯೋ ಹಾಗೆ ಇನ್ನು ಮೇಲೆ ನೀವು ತಂಪು ಟೀಯನ್ನು ಸೀಸೆಗಳಿಂದ ಕುಡಿಯಬಹುದು."

"ಇನ್ನೂ ಏನೇನು ಕಂಡು ಹಿಡೀತಾರೋ?" ಪ್ರಾಂಜಲ್ ಆಶ್ಚರ್ಯಪಟ್ಟ.

"ಪ್ರತಿದಿನ ಒಂದೊಂದು ಹೊಸದು ಇದ್ದೇ ಇರುತ್ತೆ. ಹಾ, ಈಗ ಹೊತ್ತಾಯಿತು, ಕಾರ್ಖಾನೆಗೆ ಹೋಗೋಣ," ಬರುವಾ ಎದ್ದರು.

ಅದೇ ಕ್ಷಣ ಒಬ್ಬ ವ್ಯಕ್ತಿ ಕೂಗಿಕೊಳ್ಳುತ್ತಾ ಓಡಿಬಂದ - "ಸಾಹೇಬ್ ನಮ್ಮ ಉಗ್ರಾಣದಲ್ಲಿ ಕಳುವಾಗಿದೆ. ಚಹಾ ಪೆಟ್ಟಿಗೆಗಳನ್ನು ಯಾರೋ ಕದ್ದಿದ್ದಾರೆ." ಅವನು ಉಸಿರು ಕಟ್ಟಿದವನಂತೆ ಹೇಳಿದ.

"ಏನಂದೆ?" ಬರುವಾ ಗಟ್ಟಿಯಾಗಿ ಕೂಗಿದರು. "ಎಷ್ಟಿದ್ದುವು ಪೆಟ್ಟಿಗೆಗಳು?"

"ನಂಗೊತ್ತಿಲ್ರೀ. ನಿಮ್ಮನ್ನು ಕರಕೊಂಡು ಬಾ ಅಂತ ಕಾರಕೂನ ಡೇಕಾಬಾಬು ಹೇಳಿದ್ರು."

ಬರುವಾ ಪೋಲಿಸ್ ಠಾಣೆಗೆ ಟೆಲಿಫೋನ್ ಮಾಡಿ ಕಳುವಾಗಿರುವ ವಿಷಯ ತಿಳಿಸಿದರು. ನಂತರ ಅವರೂ ಮಕ್ಕಳೂ ಉಗ್ರಾಣದತ್ತ ಹೊರಟರು.

ವಿಶಾಲವಾದ ಕಾರ್ಖಾನೆಯ ಆವರಣದ ಸುತ್ತ ಮುಳ್ಳು ತಂತಿಯ ಬೇಲಿಯಿತ್ತು. ಉಗ್ರಾಣವಿದ್ದುದು ಕಾರ್ಖಾನೆಯ ಮುಖ್ಯ ಕಟ್ಟಡದಿಂದ ಒಂದಿಷ್ಟು ದೂರದಲ್ಲಿ, ಒಂದು ಮೂಲೆಯಲ್ಲಿ.

ಉಗ್ರಾಣದ ಮುಂದೆ ಜನರ ಗುಂಪು ಸೇರಿತ್ತು. ತೋಟದ ಮೂವರು ಸಹಾಯಕ ನಿರ್ವಾಹಕರೂ ಅಲ್ಲಿದ್ದರು. ರವಾನೆ ಕಾರಕೂನ ಡೇಕಾ ಬರುವಾ ಅವರ ಬಳಿಗೆ ಓಡಿಬಂದ.

"ಸಾರ್, ನಲವತ್ತು ಟೀ ಪೆಟ್ಟಿಗೆಗಳು ಹೊರಟುಹೋಗಿವೆ."

"ಏನಾಗಿದೆ, ವಿವರವಾಗಿ ಹೇಳು," ಬರುವಾ ಅವರು ಬಿಗಿಯಿಂದ ಕೇಳಿದರು.

"ಪೆಟ್ಟಿಗೆಗಳನ್ನು ಈ ಬೆಳಿಗ್ಗೆ ಕಳಿಸಬೇಕಾಗಿತ್ತು. ನಿನ್ನೆ ಸಂಜೆ ಮುಂದಿನ ಬಾಗಿಲಿಗೆ ನಾನೇ ಬೀಗ ಹಾಕಿದೆ. ಉಗ್ರಾಣಕ್ಕೆ ಇರೋದು ಅದೊಂದೇ ಬಾಗಿಲು. ಬೆಳಿಗ್ಗೆ ನಾನೇ ಬಾಗಿಲು ತೆಗೆದಾಗ ಉಗ್ರಾಣ ಖಾಲಿಯಾಗಿತ್ತು. ಬೀಗಗಳನ್ನು ಕೆಡಿಸಿಲ್ಲ. ವಿಚಿತ್ರವಾಗಿದೆ."

"ಪೆಟ್ಟಿಗೆಗಳಲ್ಲಿ ಎಷ್ಟು ತುಂಬಿತ್ತು?"

"ಒಂದೊಂದರಲ್ಲೂ ಐವತ್ತು ಕಿಲೊ".

"ಅಂದರೆ ಒಟ್ಟು 2000 ಕಿಲೊ ಆಯ್ತು. ಅದು ಒಳ್ಳೆ ಉತ್ತಮ ದರ್ಜೆ ಚಹಾ ಆದ್ದರಿಂದ ನಷ್ಟ ಸುಮಾರು 50 ಸಾವಿರ ರೂಪಾಯಿಯಷ್ಟಾಗುತ್ತೆ."

"ಮಾಮಾ, ಅದೇನು ಸುಮಾರು ಅಂತ ಹೇಳ್ತೀರಿ. ಬೆಲೆಗಳು ಒಂದೇ ಸಮ ಇರುತ್ತೆ, ಅಲ್ವಾ?" ರಾಜವೀರ್ ಕೇಳಿದ.

ಬರುವಾ ಅವರು ಆ ಸನ್ನಿವೇಶದಲ್ಲೂ ಸಹನೆಯಿಂದಲೇ ಉತ್ತರ ಕೊಟ್ಟರು. "ರಾಜವೀರ್, ಟೀ ಎಲೆಯನ್ನು ತೋಟಗಳ ಹತ್ತಿರವೇ ಮಾರುವುದಿಲ್ಲ. ಗುವಹಟಿ ಅಥವಾ ಕಲ್ಕತ್ತದಲ್ಲಿರುವ ಹರಾಜು ಕೇಂದ್ರಗಳಲ್ಲಿ ಇರುವ ದಳ್ಳಾಳಿಗಳಿಗೆ ಅದನ್ನು ಕಳಿಸ್ತೇವೆ. ಟೀ ರುಚಿಗಾರರು ಅಲ್ಲಿ ಅದನ್ನು ಪರೀಕ್ಷಿಸಿ ಬೆಲೆ ನಿರ್ಧರಿಸುತ್ತಾರೆ. ಕಡೇ ಪಕ್ಷ ಅಷ್ಟು ಬೆಲೆ ಬರಬೇಕು ಅಂತ ಇಟ್ಟುಕೊಂಡು, ಆಗ ಮಾಡೋ ಹರಾಜಿನಲ್ಲಿ ಹೆಚ್ಚಿನ ಬಿಡ್ಡುದಾರನಿಗೆ ಮಾರುತ್ತೇವೆ."

ಅಷ್ಟು ಹೇಳಿದ ಬರುವಾ ಅವರು ಹಠಾತ್ತನೆ ಕಾರ್ಖಾನೆಯ ಕಾವಲುಗಾರ ಬಿರ್ಜಿಯನ್ನು ಹತ್ತಿರ ಕರೆದು ಕೇಳಿದರು - "ನಿನ್ನೆ ರಾತ್ರಿ ಏನಾದರೂ ವಿಶೇಷ ಕಂಡೆಯಾ?"

"ಇಲ್ಲ, ಸಾಹೇಬರೇ, ಉಗ್ರಾಣದ ಹತ್ತಿರ ಒಂದು ಪಿಳ್ಳೇನೂ ಸುಳೀಲಿಲ್ಲ."

"ನೀನು ಖಂಡಿತ ನಿದ್ದೆ ಮಾಡ್ಲಿಲ್ಲ ತಾನೇ?"

"ಹಂಗೆ ಹೇಳಬೇಡ್ರೀ ಸಾಹೇಬರೇ. ಸಾವನಾಗೆ ಚಿರತೆ ಕಂಡಾಗಿನಿಂದ ನಾನು ರಾತ್ರಿ ಪೂರ್ತಿ ತುಂಬ ಎಚ್ಚರಾಗಿರ್ತಿನ್ರೀ."

ಅವರುಗಳು ಉಗ್ರಾಣದೊಳಕ್ಕೆ ಹೋದರು. ಅದು ಒಂದೇ ಕೊಠಡಿಯಂಥ ಕಟ್ಟಡ. ನೆಲ ಅಂದರೆ ನುಣುಪಾಗಿ ಪಾಲಿಷ್ ಆಗಿದ್ದ ಮರ. ಕಿಟಕಿಗಳೇ ಇಲ್ಲ. ವಾತಾಯನಗಳಲ್ಲಿ ದಪ್ಪ ಪಟ್ಟಿಗಳಿದ್ದುವು.

ಒಂದು ಮೂಲೆಯಲ್ಲಿ ರವಾನೆ ಗುಮಾಸ್ತನ ಮೇಜು. ಅದಕ್ಕೆ ಹೊದಿಸಿದ್ದ ಮೇಜು ಬಟ್ಟೆಯ ಒಂದು ತುದಿ ನೆಲದ ಮೇಲೆ ಹಾಸಿತ್ತು. ಮಿಕ್ಕಂತೆ ಉಗ್ರಾಣ ಖಾಲಿ.

ರಾಜವೀರ್ ಮತ್ತು ಪ್ರಾಂಜಲ್ ಕುತೂಹಲ ತುಂಬಿ ಒಬ್ಬರೊಬ್ಬರ ಕಡೆ ನೋಡಿಕೊಂಡರು. ಇಬ್ಬರೂ ಪತ್ತೇದಾರಿ ಪುಸ್ತಕಗಳನ್ನು ಡಜನ್‌ಗಟ್ಟಲೆ ಓದಿದ್ದರು. ಆ ಜ್ಞಾನವನ್ನು ಈಗೇಕೆ ಉಪಯೋಗಿಸಬಾರದು? - ಅಂತ ಯೋಚನೆ.

ಬರುವಾ ಮತ್ತು ಇತರರು ಗಂಭೀರವಾಗಿ ಚರ್ಚೆ ಮಾಡುತ್ತಿದ್ದಾಗ, ಇಬ್ಬರು ಮಕ್ಕಳೂ ಉಗ್ರಾಣವನ್ನೆಲ್ಲ ಸುತ್ತಿದರು.



ಇಬ್ಬರೂ ಸುಳಿವು ಸಿಕ್ಕೀತೆಂದು ಹುಡುಕುತ್ತಿದ್ದರು.

ಕೈಕಾಲುಗಳ ಮೇಲೆ ಅಂಬೆಗಾಲಿಟ್ಟಂತೆ ನೆಲವನ್ನು ಪರೀಕ್ಷಿಸುತ್ತಿದ್ದ ಪ್ರಾಂಜಲ್ ಇದ್ದಕ್ಕಿದ್ದಂತೆ ಕೂಗಿದ - "ರಾಜವೀರ್, ಅಲಕಾ, ಬನ್ನಿ ಇಲ್ಲಿ!"

ನೆಲದ ಮೇಲೆ ಎರಡು ಮೂರು ಮಸಕಾದ ಹೆಜ್ಜೆ ಗುರುತುಗಳಿದ್ದುವು!

ಪ್ರಾಂಜಲ್ ಕೇಳಿದ - "ಅಲಕಾ, ಇಲ್ಲಿ ಮಳೆ ಬಿದ್ದದ್ದು ಯಾವಾಗ?"

"ಸುಮಾರು ಒಂದು ವಾರ ಆಯಿತು."

"ತುಂಬ ವಿಚಿತ್ರ ಅನಿಸುತ್ತೆ। "ಪ್ರಾಂಜಲ್ ಹೇಳಿದ," ಅಂದರೆ ಒಂದು ವಾರದಿಂದ

ಇಲ್ಲಿ ಮಳೆ ಬಿದ್ದಿಲ್ಲ. ಹೊರಗೆ ನೆಲ ಕಲ್ಲಿನ ಹಾಗೆ ಗಡುಸಾಗಿದೆ. ಆದರೂ ಇಲ್ಲಿ ಕೆಸರಿನ ಗುರುತಿದೆ. ಯಾರದೋ ಕಾಲಿಗೆ ಕೆಸರು ಮೆತ್ತಿಕೊಂಡಿತ್ತು!"

"ಇದು ತುಂಬ ಒಳ್ಳೆ ಸುಳಿವು ಅಂತ ಕಾಣುತ್ತೆ," ರಾಜವೀರ್ ಒಪ್ಪಿದ.

ಇನ್ನಷ್ಟು ಹೊತ್ತು ಸುಮ್ಮನೆ ಹುಡುಕುತ್ತಲೇ ಇದ್ದರು. ಕಡೆಗೆ ಒಂದು ಚೂರು **ಹಳದಿ** ಜೇಡಿಮಣ್ಣು ರಾಜವೀರ್ ಕಣ್ಣಿಗೆ ಬಿತ್ತು. ಅದನ್ನು ಬರುವಾ ಅವರ ಬಳಿಗೆ ಒಯ್ದರು.

"ಮಾಮಾ, ತೋಟದಲ್ಲಿ ಎಂಥ ಮಣ್ಣಿದೆ, ಹೇಳ್ತೀರಾ?"

ಬರುವಾ ಅವರು ಸ್ವಲ್ಪ ತಬ್ಬಿಬ್ಬಾದರು. "ಮರಳು-ಜೇಡಿ ಅಂತ ಹೇಳಬಹುದು. ಮತ್ತೆ ಹುಳಿ ಮಣ್ಣು." ಸಹನೆಯಿಂದಲೇ ಹೇಳಿದರು. "ಬೆರಕೆ ಜೇಡಿ ನೆಲದಲ್ಲಿ ಮರಳು ಮತ್ತು ಜೇಡಿಮಣ್ಣು ಸಮಸಮವಾಗಿರುತ್ತೆ. ಜೇಡಿಗಿಂತ ಮರಳು ಜಾಸ್ತಿ ಇರೋದಕ್ಕೆ ಮರಳು ಜೇಡಿ



ಅಂತ ಹೇಳ್ತಿವೆ. ಅದರಲ್ಲಿ ಶೋಧಿಸಿಕೊಂಡ ಹಾಗೆ ಕೆಳಗಿಳಿದು ಹೋಗೋದರಿಂದ ಟೀ ಬೆಳೆಯಕ್ಕೆ ತುಂಬ ಒಳ್ಳೆ ನೆಲ."

"ಹಾಗಾದ್ರೆ ಈ ಹಳದಿ ಜೇಡಿಮಣ್ಣಿನ ಚೂರು ಉಗ್ರಾಣದ ನೆಲದ ಮೇಲೆ ಹೇಗೆ ಬಂತು"

ಬರುವಾ ಮಣ್ಣಿನ ತುಂಡನ್ನು ಚೆನ್ನಾಗಿ ನೋಡಿದರು. ತೋಟದ ನೆಲದ್ದಂತೂ ಅದು ಖಂಡಿತ ಅಲ್ಲ. ಈ ಒಗಟನ್ನು ಅವರು ಯೋಚಿಸುತ್ತಿದ್ದ ಹಾಗೇ ಪೋಲಿಸಿನವರು ಬಂದರು.

ಆ ಚೂರನ್ನು ಅವರು ರಾಜವೀರ್‌ಗೆ ಕೊಟ್ಟು, ಪೋಲಿಸ್ ಅಧಿಕಾರಿ ಶ್ರೀ ಕೊಟೊಕಿ ಅವರೊಡನೆ ಮಾತಿಗೆ ಹೋದರು. ರಾಜವೀರ್ ಅದನ್ನು ಹುಷಾರಾಗಿ ಒಂದು ಚೂರು ಕಾಗದದಲ್ಲಿ ಪೊಟ್ಟಣ ಕಟ್ಟಿ ಜೇಬಿನಲ್ಲಿಟ್ಟುಕೊಂಡ.

ಕಳ್ಳರು ಮುಂದಿನ ಬಾಗಿಲನ್ನು ತೆಗೆಯದೆಯೇ ಹೇಗೆ ಒಳಗೆ ಬಂದರು ಎಂಬುದು ಪೋಲಿಸ್ ಅಧಿಕಾರಿ ಕೊಟೊಕಿ ಅವರಿಗೆ ಸಮಸ್ಯೆ ಆಗಿತ್ತು.

"ಹೊರಗಡೆ ಸ್ವಲ್ಪ ಸುತ್ತಿ ನೋಡಿಕೊಂಡು ಬರ್ತೇನೆ," ಎಂದು ಅವರು ಬರುವಾಗೆ ಹೇಳಿದರು.

"ನಮಗೆ ಕೆಲವು ಸುಳಿವು ಸಿಕ್ಕಿಬಿಟ್ಟಿವೆ," ರಾಜವೀರ್ ಉಸಿರುಕಟ್ಟಿದವನಂತೆ ಬಡಬಡಿಸಿದ. "ಅವನ್ನು ನೀವು ನೋಡ್ತೀರಾ?"

"ಡ್ಯಾಡಿ, ನಾವೂ ಪತ್ತೆಕೆಲಸದಲ್ಲಿ ಸೇರಿಕೊಳ್ಳೋಣವಾ?" ಪ್ರಾಂಜಲ್ ಕೇಳಿದ.

ಕೊಟೊಕಿ ಅವರ ಮುಖ ಕೋಪದಿಂದ ಗಂಟಿಕ್ಕಿತ್ತು. ಅವರು ಸಿಡುಕಿ ಹೇಳಿದರು - "ಶ್ರೀಮಾನ್ ಬರುವಾ ಅವರೇ, ಕಳ್ಳರನ್ನು ಹಿಡಿಯುವುದು ಮಕ್ಕಳ ಆಟವಲ್ಲ. ಈ ಹೈದರೆಲ್ಲ ದೂರ ಇರುವಂತೆ ಹೇಳಿ."

"ನೋಡಿರಪ್ಪ, ಅವರು ಹೇಳೋದು ಸರಿ," ಬರುವಾ ಅವರು ಹುಡುಗರಿಗೆ ತಿಳಿಸಿದರು. "ಇದು ಪೋಲಿಸ್ ತನಿಖೆ ಕೆಲಸ. ನೀವುಗಳು ಅಡ್ಡ ಬರಬಾರದು. ಮೊದಲೇ ಅಂದುಕೊಂಡ ಹಾಗೆ ನೀವು ಹೋಗಿ ಯಾಕೆ ಈಜಾಡಬಾರದು? ನಾನು ಇವತ್ತಂತೂ ನಿಮಗೆ ಕಾರ್ಖಾನೆ ತೋರಿಸಕ್ಕೆ ಆಗಲ್ಲ."

ಅಲಕಾ ಮತ್ತು ಇಬ್ಬರು ಹುಡುಗರೂ ಹೊರಕ್ಕೆ ನಡೆದರು. ಗದರಿಸಿಕೊಂಡದ್ದರಿಂದ ಅವರಿಗೆ ಕೋಪ ಬಂದಿತ್ತು.



# 5

ಬೇರೇನೂ ಕೆಲಸವಿಲ್ಲದ್ದರಿಂದ ಅವರು ಮೂವರೂ ಈಜಾಡಲು ನದಿಕಡೆಗೆ ಹೊರಟರು. ಹೊರಗೆ ಎದುರಾದ ಮೋಂಗ್ಲನನ್ನೂ ಜೊತೆಗೆ ಕರೆದುಕೊಂಡರು. ಬಂಗಲೆಗೆ ಹೋಗುವ ದಾರಿಯಲ್ಲಿ ಅವರು ತಮಗೆ ಸಿಕ್ಕಿದ್ದ ಸುಳಿವುಗಳನ್ನು ಮೋಂಗ್ಲನಿಗೆ ವಿವರಿಸಿದರು. ತಮ್ಮ ಕಾರ್ಯಕ್ರಮ ಬದಲಾದುದನ್ನು ಅವರು ಶ್ರೀಮತಿ ಬರುವಾಗೆ ತಿಳಿಸಿ, ಟ್ರ್ಯಾಫಿಯನ್ನೂ ಜೊತೆಗಿಟ್ಟುಕೊಂಡು ನದಿ ಕಡೆ ಹೆಜ್ಜೆ ಹಾಕಿದರು. ದೆಕಿಯಬಾರಿ ತೋಟದ ದಕ್ಷಿಣದ ಎಲ್ಲೆಯುದ್ದವೂ ನದಿ ಹರಿಯುತ್ತಿತ್ತು.

ಕೋಲಾಹಲಕರವಾದ ಕಳ್ಳತನವಾಗಿದ್ದರೂ ಕೆಲಸವೇನೂ ನಿಂತಿರಲಿಲ್ಲ. ಚಹಾ ಪೊದರುಗಳ ಮಧ್ಯೆ ಆಳುಗಳು ಎಲೆ ಕೀಳುತ್ತಲೇ ಇದ್ದರು.

"ನಿಮ್ಮ ಆಳುಗಳ ಕೆಲಸ ತುಂಬಾ ನಿಧಾನ," ರಾಜವೀರ್ ಹೇಳಿದ. "ಅವರ ಎರಡರಷ್ಟು ಎಲೆಗಳನ್ನು ಅದರ ಅರ್ಧ ಸಮಯದಲ್ಲಿ ನಾನು ಕೀಳ್ತೀನಿ."

ಮಾತು ಮೋಂಗ್ಲನಿಗೆ ತಮಾಷೆ ಅನಿಸಿತು. ಮುಖವೇ ಮುಚ್ಚಿಕೊಳ್ಳುವಷ್ಟು ಅಗಲವಾಗಿ ಹಲ್ಲು ಕಿಸಿದು ನಕ್ಕ.

"ಹಹ್ಹಹ್ಹಾ! ಹಾಗಂತೀರಾ? ಇಲ್ಲಿ ಬನ್ನಿ. ನಮ್ಮ ಸೋದರತ್ತೆ ಸುಖಮಣಿ ಇಲ[illegible] ನೋಡೋಣ, ಯಾರು ಬೇಗ ಎಲೆ ಕೀಳ್ತೀರೀಂತ, ನೀವೋ ಅ[illegible]

"ಸುಖೂ ಅತ್ತೆ, ನಮ್ಮ ರಾಜವೀರ್ ಕೂಡ ಎಲೆ ಕೀಳ್ತಾರಂತೆ. ನಿಮ್ಮ ಜೊತೆಗೆ ಕರೆದುಕೊಳ್ಳಿ."

ಇಬ್ಬರೂ ಚಹಾ ಪೊದೆಗಳೊಳಗೆ ಹೋದರು. ಸುಖಮಣಿ ನಗುತ್ತಾ ಅವರನ್ನು ಸ್ವಾಗತಿಸಿದಳು.

ಸವಾಲನ್ನು ಎದುರಿಸುವವನಂತೆ ರಾಜವೀರ್ ಎರಡೂ ಹಿಡಿ ತುಂಬ ಎಲೆಗಳನ್ನು ಕಿತ್ತ.

“ಹಂಗಲ್ರೀ, ಚಿಕ್ಕಬುದ್ಧಿಯೋರೇ,” ಸುಖಮಣಿ ಹೇಳಿದಳು. “ಕೈಗೆ ಸಿಕ್ಕಿದ ಎಲೇನೆಲ್ಲ ಕಿತ್ತಾಕಬಾರ್ದು. ಎರಡೆಲೆ, ಒಂದು ಮೊಗ್ಗು ಇರೋ ಹಂಗ ಕೀಳಬೇಕ್ರೀ. ಮೂರನೆ ಎಲೇಗೆ ಮುಂಚೆ ಕಡ್ಡಿ ಮುರಿಬೇಕು. ನೋಡಿ, ಹಿಂಗೆ...”

ತನ್ನ ಕುಶಲವಾದ ಬೆರಳುಗಳಿಂದ ಸುಖಮಣಿ ಒಂದು ಕಾಂಡದಲ್ಲಿ ಎರಡೆಲೆ ಮತ್ತು ಒಂದು ಮೊಗ್ಗಿರುವಂತೆ ಮುರಿದು ಅದನ್ನು ರಾಜವೀರ್ ಕೈಗೆ ಕೊಟ್ಟಳು. ಎಲೆಗಳೂ ಕೂಡ ಹೊಸದಾಗಿ ಹುಟ್ಟಿದ್ದುವಾದ್ದರಿಂದ ಎಳೆಯವಾಗಿ, ಮೃದುವಾಗಿದ್ದುವು. ಮೊಗ್ಗು ಅಂದರೆ ಅದು ಹೂವಿನ ಮೊಗ್ಗಿನಂತಲ್ಲ. ಇನ್ನೂ ಬಿಚ್ಚಿಕೊಳ್ಳದೆ ಇದ್ದ ಹೊಸ ಎಲೆ.

ಸುಖಮಣಿ ಇನ್ನಷ್ಟು ವಿವರಿಸಿದಳು - “ಪ್ರತಿವರ್ಷ ಮಳೆಗಾಲದಲ್ಲಿ ಹೊಸ ಎಲೆಗಳು ಹುಟ್ಟುತ್ತವೆ. ಚಾ ಮಾಡೋದಕ್ಕೆ ಇವನ್ನೇ ಬಳಸೋದು, ಹಳೇ ಎಲೆಗಳನ್ನಲ್ಲ. ಒಂದು ಮೊಗ್ಗು, ಎರಡೆಲೆಗಿಂತ ಹೆಚ್ಚಾಗಿರೊ ಹಾಗೆ ಕಿತ್ತರೆ ಚಹಾ ರುಚಿ ಚೆನ್ನಾಗಿರಲ್ಲ.”



"ಅದಕ್ಕೆ ಟೀ ಪೊದೆಗಳನ್ನು ಕತ್ತರಿಸ್ತಾರೆ," ಮೋಂಗ್ಲ ಹೇಳಿದ. "ಹಾಗೆ ಕತ್ತರಿಸದಿದ್ದರೆ ಗಿಡ ತುಂಬ ಎತ್ತರ ಬೆಳೆದುಬಿಡುತ್ತೆ. ಕತ್ತರಿಸುತ್ತಿದ್ದರೆ ಗಿಡಗಳು ಪೊದೆಗಳ ಹಾಗೆ ಗಿಡ್ಡಾಗಿರುತ್ತೆ. ಹೆಚ್ಚು ಕೊಂಬೆಗಳು ಬಂದು, ಕೆಳಕ್ಕೆ ಹೆಚ್ಚು ಕುಡಿಗಳು ಸಿಕ್ತವೆ."

"ಹೌದ್ರಿ," ಸುಖಮಣಿ ಒಪ್ಪಿದಳು. "ಪೊದೆಗಳೂ ನಡುತನಕಾನೇ ನಿಲ್ತವೆ. ನಾವು ಕೀಳಕ್ಕೆ ಸುಲಭ. ಬೇಗ ಬೇಗ ಕೀಳ್ಬಹುದು."

"ಸರಿ, ಇನ್ನು ನಾನು ಮಾತಾಡಲ್ಲಪ್ಪ" ಅಂದ ರಾಜವೀರ್. ಎಲ್ಲರೂ ಮುಂದೆ ನಡೆದರು.

ಟೀ ತೋಟದ ಅಂಚಿನಲ್ಲಿ ಹಾದಿ ಸಾಗಿದ ಕಡೆ ಟೀ ಪೊದೆಗಳು ಇರಲಿಲ್ಲ. ಅಗಲವಾದ ದಳಗಳಂಥ ಎಲೆಗಳಿದ್ದ ಗಿಡಗಳು ಬೆಳೆದಿದ್ದವು.

ಪ್ರಾಂಜಲ್ ಹೇಳಿದ - "ಅದು ಗಾಟೆಮಾಲಾ ಗಿಡ. ನೆಲದಲ್ಲಿ ಹಸಿರೆಲೆ ಗೊಬ್ಬರ ಆಗಕ್ಕೆ ಬೇಳಿತೇವೆ. ನಾಟಿ ಮಡಿ ನೋಡಿದ್ದೀಯಲ್ಲ, ನೀನು ಆ ನರ್ಸರೀಲಿ ನೋಡಿದ ಚಹಾ ಸಸಿಗಳನ್ನು ಇಲ್ಲಿ ನೆಡ್ತಾರೆ. ಗಾಟೆಮಾಲಾ, ಮುಟ್ಟಿದರೆ ಮುನಿ, ನಿಂಬೆಹುಲ್ಲು ಮುಂತಾದ ಹಸಿರು ಸಸಿಗಳು ನೆಲ ಫಲವತ್ತಾಗಲು ಬೇಕಾದ ಸೂಕ್ಷ್ಮಜೀವಿಗಳನ್ನು ಒದಗಿಸಿ, ಬಳಕೆಯಾದ ಭೂಮಿಗೆ ಮತ್ತೆ ಸತ್ವ ಕೊಡುತ್ತವೆ."

"ನಿಂಬೆಹುಲ್ಲು? ಅದು ಎಣ್ಣೆ ತೆಗೆಯೋ ಹುಲ್ಲು ಅಲ್ಲವಾ?"

"ಹೌದು. ಅದರಲ್ಲಿ ಘಮ್ ಅಂತ ನಿಂಬೆಹಣ್ಣಿನ ಪರಿಮಳ ಇದೆ. ಸಾಬೂನುಗಳಲ್ಲಿ, ಸೆಂಟುಗಳಲ್ಲಿ ಅದನ್ನು ಬಳಸುತ್ತಾರೆ. ಈ ವಾಣಿಜ್ಯ ಉದ್ದೇಶಕ್ಕಾಗಿ ಅನೇಕ ತೋಟಗಳಲ್ಲಿ ಈಚೆಗೆ ಅದನ್ನು ಬೆಳೀತಾರೆ."

ಹಾಗೇ ಮಾತಾಡುತ್ತಾ ಅವರು ಟೀ ತೋಟದ ಗಡಿಯಲ್ಲಿ ಹಾಕಿದ್ದ ತಂತಿಬೇಲಿ ಹತ್ತಿರ ಬಂದರು. ಒಂದು ಕಬ್ಬಿಣದ ಗೇಟ್‌ಮೇಲೆ ಹತ್ತಿ ಅದನ್ನು ದಾಟಿ ಸ್ವಲ್ಪ ಜೌಗು ನೆಲವನ್ನು ಹಾದು ನದಿ ಹತ್ತಿರ ಬಂದರು.

ಪಕ್ಕದ ಪ್ರದೇಶಗಳಿಗೆ ಪ್ರವಾಹದಿಂದ ರಕ್ಷಣೆ ಇರುವಂತೆ ನದಿ ದಂಡೆಯುದ್ದಕ್ಕೂ ಎತ್ತರದ ಏರಿಯಿತ್ತು. ಮಕ್ಕಳು ಅದನ್ನು ಹತ್ತಿದರು. ಮೇಲೆ ಹೋದಾಗ ರಾಜವೀರ್ ಆಶ್ಚರ್ಯದಿಂದ ಏದುಸಿರುಬಿಟ್ಟು ನೆಲವನ್ನೇ ನೋಡುತ್ತಾ ಬಗ್ಗಿದ.

ಚಹಾ ಉಗ್ರಾಣದಲ್ಲಿ ಸಿಕ್ಕಿ ತಾನು ಎತ್ತಿಟ್ಟುಕೊಂಡಿದ್ದ ಮಣ್ಣಿನ ಚೂರನ್ನು ಜೇಬಿನಿಂದ ಈಚೆಗೆ ತೆಗೆದ. ಏನೂ ಸಂದೇಹವೇ ಉಳಿಯಲಿಲ್ಲ. ಅದೂ ಕೂಡ ಇಲ್ಲಿದ್ದ ಹಳದಿ ಜೇಡಿಮಣ್ಣೇ ಆಗಿತ್ತು.

"ಕಳ್ಳರು ಇಲ್ಲಿಂದಲೇ ಬಂದಿದ್ದು!" ರಾಜವೀರ್ ಉದ್ವೇಗದಿಂದ ಹೇಳಿದ.

"ನೆಲ ಗಟ್ಟಿಗಿದೆ," ಪ್ರಾಂಜಲ್ ಮಾತು. "ಈ ಜೇಡಿಮಣ್ಣು ತೇವವಾಗಿಲ್ಲದೆ ಹೋದರೆ ಬೂಟ್ಸುಗಳಿಗೆ ಅಂಟುತ್ತಿರಲಿಲ್ಲ."

"ಅರ್ಥ ಇಷ್ಟೆ," ಅಲಕಾ ಸೇರಿಸಿದಳು. "ಕಳ್ಳರು ಬಂದಷ್ಟು ಹೊತ್ತು ನದಿ ಒಳಗಿದ್ದರು."

ಹುಡುಗರು ಈ ಹೊಸ ಸುಳಿವನ್ನು ಮನಸ್ಸಿನಲ್ಲಿಟ್ಟುಕೊಂಡು, ಈಜಲು ನದಿಯೊಳಕ್ಕೆ ಬಿದ್ದರು.ಅಲಕಾ ಮತ್ತು ಟ್ರಾಫಿ ದಡದ ಮೇಲೆ ಓಡಾಡುತ್ತಿದ್ದರು.

ಅಲಕಾಳ ಕಾಲು ಇದ್ದಕ್ಕಿದ್ದಂತೆ ಚಾಚಿದ ಕಲ್ಲಿಗೆ ತಗುಲಿ ಅವಳು ಎಡವಿಬಿದ್ದಳು. ದಡದಿಂದ ಕೆಳಕ್ಕೆ ಜಾರುತ್ತಿದ್ದಂತೆ ಅವಳು ಕಿರುಚಿಕೊಳ್ಳುತ್ತ ನೀರಿನೊಳಕ್ಕೇ ಬಿದ್ದಂತಾಯಿತು.

ಆದರೆ ಕಡೇ ಗಳಿಗೆಯಲ್ಲಿ ಅವಳ ಚಾಚಿದ ಕೈಗಳಿಗೆ ಇಳಿಜಾರಿನ ತುದಿಯಲ್ಲಿ ಬೆಳೆದಿದ್ದ ಸಣ್ಣ ಪೊದೆ ಸಿಕ್ಕಿತು. ಅದನ್ನೇ ಅವಳು ಬಿಗಿಯಾಗಿ ಹಿಡಿದು ಸ್ವಲ್ಪ ನೀರಿನ ಮೇಲಿರುವಂತೆ ನೇತಾಡುತ್ತಿದ್ದಳು.

ಅಲಕಾ ಕಿರುಚಿದ್ದನ್ನೂ ಟ್ರ್ಯಾಫಿ ಬೊಗಳಿದ್ದನ್ನೂ ಕೇಳಿಸಿಕೊಂಡ ಹುಡುಗರು ನದಿಯಿಂದ ಹೊರಕ್ಕೆ ಅವಸರದಲ್ಲಿ ಬಂದರು.

ಪ್ರಾಂಜಲ್ ಕೂಗಿ ಹೇಳಿದ - "ಹಿಡಿದುಕೊಂಡಿರು, ಅಲಕಾ. ನಾವು ಬರ್ತಿದ್ದೇವೆ."

ಆದರೆ ಅವರು ಅಲಕಾಳ ಹತ್ತಿರ ಬರುವ ಮುನ್ನವೇ ಆ ಪೊದೆ ಅವಳ ಭಾರವನ್ನು ತಡೆಯಲಾರದೆ ಕಿತ್ತುಬಂತು. ಅಲಕಾ ನದಿಗೆ ಬಿದ್ದಳು.

ಗಾಬರಿಗೊಂಡ ಹುಡುಗರು ಅಲಕಾ ಬೀಳುವಳೆಂದು ಕಾದಾಗ, ಮೆಲ್ಲನೆ ಥಡ್ ಎಂದು ಸದ್ದಾಗಿ, ಅಲಕಾ ಕ್ಷಣದಲ್ಲಿ ಎದ್ದು ನಿಂತಳು, ಬಿಳಚಿಕೊಂಡಿದ್ದಳು. ಆದರೆ ಗಾಯಗಳೇನೂ ಆಗಿರಲಿಲ್ಲ.

ಹುಡುಗರು ನಂಬಲಾರದವರಂತೆ ಅವಳೆಡೆಗೆ ನೆಟ್ಟನೆ ನೋಡುತ್ತಿದ್ದರು. ಅವಳ ಮೊಣಕಾಲ ತನಕ ಪೊದೆಗಳೇ ಇದ್ದುವು! ಅಲಕಾ ನೀರಿನ ಮೇಲೆ ನಿಂತಂತಿತ್ತು!

ಅವರೆಲ್ಲ ಅವಳ ಹತ್ತಿರಕ್ಕೆ ಹೋದಾಗ ಗುಟ್ಟು ರಟ್ಟಾಯಿತು. ಮರದ ದೋಣಿಯೊಂದನ್ನು ದಡಕ್ಕೆ ಕಟ್ಟಿ, ತುಂಬ ಜಾಗರೂಕತೆಯಿಂದ ಪೊದೆಗಳನ್ನು ಹಾಕಿ ಅದನ್ನು ಮುಚ್ಚಲಾಗಿತ್ತು. ಅಲಕಾ ಸೀದಾ ಅದರೊಳಕ್ಕೆ ಬಿದ್ದಿದ್ದಳು.

"ದೇವರು ದೊಡ್ಡವನು. ನಿನಗೇನೂ ಆಗ್ಲಿಲ್ಲವಲ್ಲ!"

"ಆದರೂ, ಎಷ್ಟು ಗಾಬರಿ ಮಾಡಿದೆಯಲ್ಲ!"

“ಇದೆಲ್ಲ ನೋಡಿದರೆ ತುಂಬ ಅನುಮಾನ ಬರುತ್ತಲ್ಲ,” ಮೋಂಗ್ಲ ನುಡಿದ.

“ಯಾಕೆ?” ಪ್ರಾಂಜಲ್ ಪ್ರಶ್ನಿಸಿದ. “ನದಿದಂಡೆಗೆ ಒಂದು ದೋಣಿ ಕಟ್ಟಿದರೆ ಅದರಲ್ಲೇನಿದೆ ಅನುಮಾನ ಬರಕ್ಕೆ? ಅಂಥವು ಡಜನ್‌ಗಟ್ಟಲೆ ಇರಬೇಕು.”

“ಅದು ಸರಿ,” ಮೋಂಗ್ಲ ಮತ್ತೆ ಹೇಳಿದ, “ಆದರೆ ಯಾರೂ ದೋಣೀನ ಮುಚ್ಚಿಡಲ್ಲ, ಇದನ್ನು ಮಾಡಿರೊ ಹಾಗೆ.”

“ನೋಡಿ, ನನ್ನ ತಲೆಗೆ ಏನೋ ಒಂದು ಅರ್ಥ ಹೊಳೀತಾ ಇದೆ. ಆದಷ್ಟು ಬೇಗ ಈ ಜಾಗವನ್ನು ಬಿಟ್ಟು ಹೋಗೋಣ,” ರಾಜವೀರ್ ಅವಸರ ಪಡಿಸಿದ.

ಅವರುಗಳು ಬೇಗಬೇಗನೆ ದೋಣಿಯನ್ನು ಮುಚ್ಚುವಂತೆ ಪೊದೆಗಳನ್ನು ಹರಡಿಟ್ಟು ಮನೆ ಕಡೆ ಹೊರಟರು. ಬಂಗಲೆಯ ಸಮೀಪಕ್ಕೆ ಬಂದಾಗ ಏನೋ ಮುಖ್ಯ ಘಟನೆ ನಡೆದಿದೆಯೆಂಬ ಭಾವನೆ ಬಂತು.

ಚಹಾ ಕೀಳುವವರು ಕೆಲಸವನ್ನು ನಿಲ್ಲಿಸಿಬಿಟ್ಟು ಸಣ್ಣಸಣ್ಣ ಗುಂಪುಗಳಲ್ಲಿ ನಿಂತು ಕೈ, ತಲೆಗಳನ್ನು ಆಡಿಸುತ್ತಾ ಉದ್ವೇಗದಿಂದ ಚರ್ಚೆ ಮಾಡುತ್ತಿದ್ದರು.

ಸುಖಮಣಿ ಓಡುತ್ತಾ ಮೋಂಗ್ಲನ ಹತ್ತಿರ ಬಂದಳು. ಅವಳು ತುಂಬ ಭಾವಾವೇಶದಲ್ಲಿದ್ದಳು.

“ಮೋಂಗ್ಲ, ಪೋಲಿಸಿನವರು ನಿನ್ನ ತಂದೆಯನ್ನೂ ಡೇಕಾ ಬಾಬುವನ್ನೂ ಸೆರೆ ಮಾಡಿದ್ದಾರೆ. ಚಹಾ ಪೆಟ್ಟಿಗೆಗಳನ್ನು ಅವರಿಬ್ಬರೂ ಕದ್ದರು ಅಂತ ಪೋಲಿಸಿನವರು ಹೇಳ್ತಾರೆ.”

ಮೋಂಗ್ಲನಿಗೆ ಸಿಡಿಲು ಹೊಡೆದಂತಾಯಿತು. ಕಣ್ಣೀರಿನಿಂದ ಎರಡು ಕಣ್ಣುಗಳೂ ತುಂಬಿದುವು. ಪ್ರಾಂಜಲ್ ಅವನನ್ನು ಒಂದು ತೋಳಿನಿಂದ ತಬ್ಬಿ ಪಕ್ಕಕ್ಕೆ ಕರೆದೊಯ್ದ

“ನಮ್ಮ ಬಂಗಲೆ ಹಿಂದೆ ಇರೋ ಕೊಟ್ಟಿಗೆಗೆ ಮಧ್ಯಾಹ್ನ ಮೂರು ಗಂಟೆಗೆ ಬಂದುಬಿಡು,” ಪಿಸುಮಾತಿನಲ್ಲಿ ಪ್ರಾಂಜಲ್ ಹೇಳಿದ. “ಅಲ್ಲಿ ನಮ್ಮ ಮಂತ್ರಾಲೋಚನಾ ಸಭೆ.”



# 6

ಮಧ್ಯಾಹ್ನ ಊಟಕ್ಕೆ ಕೂತಾಗ ಬರುವಾ ಅವರು ಹೇಳಿದರು - "ನನಗೇನೋ ಡೇಕ ಮತ್ತು ಬಿರ್ಜಿ ಇಬ್ಬರೂ ಕಳ್ಳರಲ್ಲಾಂತ ಖಂಡಿತ ಇದೆ. ಇಬ್ಬರೂ ಈ ತೋಟದಲ್ಲಿ 20 ವರ್ಷಗಳಿಂದ ಕೆಲಸ ಮಾಡ್ತಿದಾರೆ."

"ಮತ್ತೆ ಪೋಲಿಸ್ನೋರು ಅವರನ್ನು ಯಾಕೆ ಹಿಡಿದಿದ್ದಾರೆ?" ಪ್ರಾಂಜಲ್ ಪ್ರಶ್ನಿಸಿದ.

"ಮುಂದಿನ ಬಾಗಿಲು ತೆಗೆಯದೆ ಯಾರೂ ಉಗ್ರಾಣದೊಳಕ್ಕೆ ಹೋಗೋದು ಸಾಧ್ಯವಿಲ್ಲ. ಆದ್ದರಿಂದ, ಆ ಬಾಗಿಲನ್ನೇ ತೆಗೆದು, ಪೆಟ್ಟಿಗೆಗಳನ್ನು ಸಾಗಿಸಿದ ಮೇಲೆ ಮತ್ತೆ ಬೀಗ ಹಾಕಿರ್ಬೇಕೂಂತ ಆ ಪೋಲಿಸ್ ಅಧಿಕಾರಿಯ ತೀರ್ಮಾನ. ಅದಕ್ಕೇ ಅವರು ಬೀಗದಕ್ಕೈ ಇಟ್ಟುಕೊಂಡಿದ್ದ ಡೇಕನನ್ನೂ ಕಾವಲುಗಾರನಾಗಿದ್ದ ಬಿರ್ಜಿಯನ್ನೂ ದಸ್ತಗಿರಿ ಮಾಡಿದ್ದಾರೆ."

ಪ್ರಾಂಜಲ್ ಏನನ್ನೋ ಹೇಳಲು ಹೊರಟ. ಆದರೆ ರಾಜವೀರ್ ಎಚ್ಚರಿಕೆಯ ಸಂಜ್ಞೆ ಮಾಡಿದ್ದರಿಂದ ಸುಮ್ಮನಾದ.

ಮಧ್ಯಾಹ್ನದ ಮೇಲೆ ಹುಡುಗರು ಮನೆ ಹಿಂದಿನ ಕೊಟ್ಟಿಗೇಲಿ ಸೇರಿದರು.

ರಾಜವೀರ್ ಹೇಳಿದ - "ನಾವು ಈಗಿನ ಅಂಶಗಳನ್ನೆಲ್ಲ ಚೆನ್ನಾಗಿ ಗಮನಿಸಿ ನಮ್ಮ ತೀರ್ಮಾನಗಳಿಗೆ ಬರೋಣ."

"ಡೇಕ ತಪ್ಪು ಮಾಡಿಲ್ಲ ಅನ್ನೋದಾದರೆ," ಪ್ರಾಂಜಲ್ ಸೂಚಿಸಿದ "ಕಳ್ಳರು ಬದಲಿ ಬೀಗದ ಕೈಗಳನ್ನಿಟ್ಟುಕೊಂಡು ಬಾಗಿಲು ತೆಗೆದಿರಬೇಕು."

"ಆದರೆ ನನ್ನ ತಂದೆ ಅವರುಗಳನ್ನು ನೋಡಿರ್ತಿದ್ದರು. ಎಲ್ಲರನ್ನೂ ಕೂಗಿ ಕರೆದಿರ್ತಿದ್ದರು," ಮೋಂಗ್ಲನ ಆಕ್ಷೇಪಣೆ.

"ಅಂದರೆ ಆ ಕಳ್ಳರು ಮುಂದಿನ ಬಾಗಿಲಿನಿಂದ ಒಳಕ್ಕೆ ಹೋಗಲಿಲ್ಲ ಅನ್ನೋದು ನಮ್ಮ ತೀರ್ಮಾನ," ಪ್ರಾಂಜಲ್ ತಿಳಿಸಿದ. ಉಳಿದವರು ಒಪ್ಪಿ ತಲೆಯಲ್ಲಾಡಿಸಿದರು.

"ಆದರೆ ಒಳಗೆ ಹೋಗಕ್ಕೆ ಬೇರೆ ದಾರಿಯೇ ಇಲ್ಲವಲ್ಲಾ?" ಅಲಕಾ ಕೇಳಿದಳು. "ಛಾವಣಿ ಮುರಿದು ಅಥವಾ ಗೋಡೆ ಕೊರೆದು ಒಳಗೆ ಹೋಗಬಹುದು. ಈಗ ಹಾಗೆ ಮಾಡಿಲ್ಲ."

"ಇನ್ನೊಂದು ರೀತಿ ಇದೆ. ಅವರು ನೆಲದಲ್ಲೇ ಸುರಂಗ ಮಾಡಿ ಅದರಿಂದ ಬಂದಿರಬಹುದು." ರಾಜವೀರ್ ಸೂಚಿಸಿದ.

"ಹಾ, ಹಾಗೆಯೇ ಇರಬೇಕು," ಪ್ರಾಂಜಲ್ ಉತ್ಸಾಹಭರಿತನಾಗಿ ಹೇಳಿದ. "ಆ ಹೆಜ್ಜೆ ಗುರುತುಗಳು ನೆಲದ ಮೇಲೆ ಬಳಿದುಕೊಂಡಿದ್ದುವು. ಅಲ್ಲವಾ? ಒಂದು ವಾರದಿಂದ ಮಳೆಯೇ ಇಲ್ಲವಾದರೂ ಆ ಗುರುತುಗಳು ತೇವವಾಗಿ, ಕೆಸರು ಸೇರಿತ್ತು."

"ಹೌದ್ಹೌದು" ಮೋಂಗ್ಲ ಒಪ್ಪಿದ. "ಸುರಂಗದೊಳಗೆ ಮಣ್ಣು ಒದ್ದೆಯಾಗಿ ಕೆಸರಾಗಿರುತ್ತೆ. ಇದೇ ಕಾರಣ ನನ್ನ ತಂದೆಗೆ ಏನೂ ಕಂಡಿಲ್ಲದೆ ಇರಕ್ಕೆ."

"ಆದರೆ ನಾವು ಉಗ್ರಾಣವನ್ನೆಲ್ಲ ಹುಡುಕಿದೆವಲ್ಲಾ?" ಅಲಕಾಗೆ ಸಂದೇಹ. "ಅಲ್ಲೆಲ್ಲೂ ನೆಲದಡಿಯ ಸುರಂಗ ಅನ್ನೋ ಅಂಥದು ಏನೂ ಕಾಣಿಸಲಿಲ್ಲ."

"ಆವಾಗ ನಾವು ಇಂಥದಕ್ಕೆ ಹುಡುಕ್ತಿರಲಿಲ್ಲ," ರಾಜವೀರ್ ಅವಳ ಸಂದೇಹಕ್ಕೆ ಉತ್ತರ ಕೊಟ್ಟ. "ಈಗ ಅದಕ್ಕಾಗಿಯೇ ಹುಡುಕ್ತೇವೆ. ಮೋಂಗ್ಲ ಉಗ್ರಾಣದೊಳಕ್ಕೆ ಮತ್ತೆ ಹೋಗಕ್ಕಾಗುತ್ತೆಯಾ?"

"ಬಾಗಿಲು ತೆಗೆದೇ ಇದೆ. ಅದು ಖಾಲಿ ಇರೋದರಿಂದ ಯಾರೂ ಬೀಗಾನೇ ಹಾಕಿಲ್ಲ."

ಎಲ್ಲರೂ ಈಚೆ ಬಂದರು. ಉಗ್ರಾಣದ ಬಳಿ ಹೋದಾಗ ಅದರ ಮುಂಬಾಗಿಲು ತೆಗೆದೇ ಇದ್ದುದನ್ನು ಕಂಡು ಅವರಿಗೆಲ್ಲ ಸಮಾಧಾನ.

ಅವರುಗಳು ಒಳಭಾಗವನ್ನೆಲ್ಲ ಬಹಳ ಹುಷಾರಾಗಿ ನೋಡುತ್ತ ಬಂದರು. ಒಮ್ಮೆಗೆ ರಾಜವೀರ್‌ನ ಮುಖ ಆನಂದದಿಂದ ಅರಳಿತು.

"ಆಹಾ!" ಅವನು ಉದ್ಗರವೆತ್ತಿದ. "ಗೆಳೆಯ ಪ್ರಾಂಜಲ್, ಒಂದು ಸರಳವಾದ ವಿಷಯ ಇದೆ. ರವಾನೆ ಮೇಜಿನ ಕೆಳಗೆ ನೋಡಬೇಕು."

ಅವರು ಬೆಳಿಗ್ಗೆ ನೆಲವನ್ನೆಲ್ಲ ನೋಡಿದ್ದರು. ಆದರೆ ಮೇಜನ್ನು ಸರಿಸಿ ಅದರ ಕೆಳಗೆ ಪರೀಕ್ಷಿಸುವ ಯೋಚನೆ ಬಂದಿರಲಿಲ್ಲ. ಈಗ ಹಾಗೆ ಮಾಡಿದರು.

ತಕ್ಷಣವೇ ಅದು ಕಾಣಿಸಿತು - ಬಲು ತೆಳ್ಳಗೆ ಚೌಕಾಕಾರದಲ್ಲಿ ಕತ್ತರಿಸಿದ್ದ ಗುರುತು. ಅದಕ್ಕಾಗಿಯೇ ಹುಡುಕದಿದ್ದರೆ ಅದು ಕಾಣಿಸುತ್ತಲೇ ಇರಲಿಲ್ಲ. ಮೋಂಗ್ಲ ಸಣ್ಣ ಚಾಕುವನ್ನು ತೆಗೆದು ಅದರ ಅಲುಗನ್ನು ಕತ್ತರಿಸಿದ್ದೆಡೆ ಇಟ್ಟ. ಹಾಗೆಯೇ ಮರವನ್ನು ಚೂರುಚೂರಾಗಿ

ಕಿತ್ತು ತನ್ನ ಬೆರಳುಗಳನ್ನು ಇಡುವಷ್ಟು ಜಾಗ ಮಾಡಿಕೊಂಡ. ಕಡೆಗೆ ಮರದ ತುದಿಭಾಗವನ್ನು ಬಿಗಿಯಾಗಿ ಹಿಡಿದು ಮೇಲೆತ್ತಿದ.

"ಊಹ್!" ಅಲಕಾ ಉದ್ವೇಗದಿಂದ ಕೂಗಿದಳು. ಸುರಂಗವೊಂದರ ಅಗಲವಾದ ಕತ್ತಲ ಬಾಯಿ ನೆಲದ ಕೆಳಗೆ ಕಂಡಿತ್ತು!

ಮರದ ಹಲಗೆಗಳನ್ನು ಕಳ್ಳರು ಗರಗಸದಿಂದ ಕುಯ್ದಿದ್ದರು. ಹಾಗೊಂದು ನೆಲ ಬಾಗಿಲು ಆಗಿತ್ತು. ಅದನ್ನೆತ್ತಿ ಅವರು ಮೇಲೆ ಬಂದಿರಬೇಕು. ಟೀ ಪೆಟ್ಟಿಗೆಗಳನ್ನೆಲ್ಲ ಸಾಗಿಸಿದಮೇಲೆ ಸುರಂಗದ ಬಾಗಿಲು ಕಾಣಿಸದಂತೆ ರವಾನೆ ಮೇಜನ್ನು ಅದರ ಜಾಗಕ್ಕೆ ಸರಿಸಿರಬೇಕು. ಕಟ್ಟಕಡೆಗೆ ಸುರಂಗದಲ್ಲಿ ಇಳಿದ ಕಳ್ಳ ತನ್ನ ಹಿಂದೆ ಬಾಗಿಲನ್ನು ಮುಚ್ಚಿಕೊಂಡಿದ್ದ.

ಮೋಂಗ್ಲ ಕವಾಟವನ್ನು ಅದರ ಜಾಗಕ್ಕೆ ಸೇರಿಸಿ, "ಅಂತೂ ತಿಳಿದಂತಾಯಿತು" ಎಂದ.

"ನಮಗೆ ಸಿಕ್ಕಿದ ಮಣ್ಣಿನ ಚೂರು, ಮುಚ್ಚಿಟ್ಟಿದ್ದ ದೋಣಿ, ಎಲ್ಲವೂ ಸರಿಯಾಗಿ ಹೊಂದುತ್ತವೆ," ರಾಜವೀರ್ ನುಡಿದ. "ಕಳ್ಳರು ಉಗ್ರಾಣಕ್ಕೆ ಒಂದು ಸುರಂಗ ಮಾಡಿದರು. ಪೆಟ್ಟಿಗೆಗಳನ್ನು ನದಿ ಬಳಿಗೆ ಒಯ್ದರು. ಕದ್ದ ಪೆಟ್ಟಿಗೆಗಳನ್ನು ದೋಣಿಯಲ್ಲಿ ಎದುರು ದಡಕ್ಕೆ ಸಾಗಿಸಿದರು. ಅವುಗಳನ್ನು ಇನ್ನೆಲ್ಲಿಗೋ ಕೊಂಡೊಯ್ಯಲು ಅಲ್ಲೊಂದು ಲಾರಿ ಕಾದಿದ್ದಿರಬೇಕು."

"ಸುರಂಗದ ಇನ್ನೊಂದು ತುದಿಯನ್ನು ಹುಡುಕಬೇಕು," ಮೋಂಗ್ಲ ಸಲಹೆ ಮಾಡಿದ.



"ಸುರಂಗದೊಳಗೇ ಯಾಕೆ ಹೋಗಬಾರದು?" ರಾಜವೀರ್ ಪ್ರಶ್ನಿಸಿದ.

"ಸೀದಾ ಕಳ್ಳರ ಮಧ್ಯಕ್ಕೇ ಹೋಗಿಬಿಟ್ಟರೆ? ಅದು ಕ್ಷೇಮವಲ್ಲ," ಮೋಂಗ್ಲ ಹೇಳಿದ.

"ಮತ್ತೆ ಹೇಗೆ ಅದನ್ನು ಕಂಡುಹಿಡಿಯೋದು?" ಅಲಕಾಳ ಪ್ರಶ್ನೆ.

ಆ ರವಾನೆ ಮೇಜಿನ ಮೇಲಿಂದ ಪ್ರಾಂಜಲ್ ಒಂದು ಪೆನ್ಸಿಲನ್ನೂ ಕಾಗದವನ್ನೂ ತೆಗೆದುಕೊಂಡ. ಸ್ಥೂಲವಾಗಿ ಒಂದು ನಕ್ಷೆ ಬರೆಯುತ್ತಾ ಹೇಳಿದ - "ನೋಡಿ, ದಕ್ಷಿಣದಿಂದ ಅಂದರೆ ನದಿ ಕಡೆಯಿಂದಲೇ ಕಳ್ಳರು ಸುರಂಗವನ್ನು ಪ್ರಾರಂಭಿಸುತ್ತಾರೆ ಅನ್ನೋದು ತುಂಬ ಸಹಜವಾದ ರೀತಿ. ಸುರಂಗವೂ ತೀರ ಹೆಚ್ಚು ಉದ್ದ ಇರಕ್ಕಾಗಲ್ಲ. ಅಬ್ಬಬ್ಬಾ ಅಂದ್ರೆ ನೂರು ಮೀಟರ್ ಇದ್ದೀತು. ಅದರಿಂದ ನಾವು ಈ ಉಗ್ರಾಣದಿಂದ ನದಿ ಕಡೆಗೆ ಒಂದು ಸರಳರೇಖೆ ಎಳೆದು, ಐವತ್ತರಿಂದ ನೂರು ಮೀಟರ್‌ನಷ್ಟು ಪ್ರದೇಶದಲ್ಲಿ ಹುಡುಕಿದರೆ, ಸುರಂಗದ ಇನ್ನೊಂದು ಬಾಯಿ ಸಿಗುತ್ತೆ."

ಅವರುಗಳು ಬಹಳ ಜಾಗರೂಕತೆಯಿಂದ ಉಗ್ರಾಣದಿಂದ ಈಚೆ ಬಂದರು. ಕೆಲಸದ ವೇಳೆ ಮುಗಿದುಹೋಗಿದ್ದರಿಂದ ಚಹಾ ಪೊದೆಗಳ ಹತ್ತಿರ ಯಾರೂ ಇರಲಿಲ್ಲ. ಹುಡುಗರು ಉದಾಸೀನದಿಂದಲೇ ನಡೆಯುತ್ತಿರುವ ಹಾಗೆ ತೋರ್ಪಡಿಸಿಕೊಂಡರೂ ಅವರ ಕಣ್ಣುಗಳು ತುಂಬ ಎಚ್ಚರಿಕೆಯಿಂದಿದ್ದುವು. ಮೋಂಗ್ಲನಿಗೆ ಅದು ಕಾಣಿಸಿತು!

ಆಳವಾದ ಒಂದು ಹಳ್ಳದ ಗೋಡೆಯಲ್ಲಿ ಮೇಲ್ಭಾಗದಲ್ಲಿ ಸುರಂಗದ ಬಾಯಿ! ಮಣ್ಣು ಮೆತ್ತಿದ ಬಿದಿರ ತಡಿಕೆಯಿಂದ ಅದನ್ನು ಮುಚ್ಚಿದ್ದರು. ಈ ಮರೆ ತುಂಬ ಸಹಜವಾಗಿ ಕಾಣಲಿ ಅಂತ ಅದರ ಮೇಲೆ ಕೆಲವು ಗಿಡಗಳನ್ನೂ ಸಿಕ್ಕಿಸಿದ್ದರು.

ಮೋಂಗ್ಲ ಹಳ್ಳಕ್ಕೆ ಇಳಿದವನು ತಡಿಕೆಯನ್ನು ಈಚೆಗೆ ತೆಗೆದು ಉಳಿದವರ ಕಡೆಗೆ ತಲೆಯಲ್ಲಾಡಿಸಿದ. ಆಮೇಲೆ ಅದನ್ನು ಮೊದಲಿದ್ದ ಹಾಗೆಯೇ ಇಟ್ಟುಬಿಟ್ಟು, ಹೇಳಿದ - "ಇಲ್ಲಿಂದ ಬೇಗ ಹೊರಟು ಹೋಗೋಣ, ಯಾರಾದರೂ ನೋಡಕ್ಕೆ ಮುಂಚೆ."

ಅವರೆಲ್ಲ ಓಡುತ್ತಾ, ನಡೆಯುತ್ತಾ, ಓಡುತ್ತಾ ಕೊಟ್ಟಿಗೆಗೆ ವಾಪಸ್ಸು ಬಂದರು.

ಪ್ರಾಂಜಲ್ ಪಿಸುಮಾತಿನಲ್ಲಿ ಹೇಳಿದ - 'ಇದನ್ನೆಲ್ಲ ತಕ್ಷಣ ಡ್ಯಾಡಿಗೆ ಹೇಳ್ಬೇಕು, ಅವರು ಪೋಲೀಸಿನವರಿಗೆ ತಿಳಿಸಿ, ಡೇಕನನ್ನೂ ಮೋಂಗ್ಲನ ತಂದೆಯನ್ನೂ ಬಿಡಿಸ ಬಹುದು."

"ಈಗಲೇ ಬೇಡ," ರಾಜವೀರ್ ಪಿಸುಗುಟ್ಟಿದ. "ಕಳ್ಳರೂ ತಮಗೇನೂ ಅಪಾಯ ಇಲ್ಲ ಅಂದುಕೊಂಡಿರಲಿ."

"ಹೌದೌದು," ಮೋಂಗ್ಲ ಮೆಲ್ಲನೆ ಹೇಳಿದ. "ನಾವು ಇನ್ನಷ್ಟು ಪುರಾವೆ ಹುಡುಕ ಬೇಕು."

"ಆದರೆ ಹೇಗೆ ಪ್ರಾರಂಭ ಮಾಡೋದು?" ಪ್ರಾಂಜಲ್ ಕೇಳಿದ.

ಮೋಂಗ್ಲನ ಮಾತಿನಲ್ಲಿ ತುಂಬ ವಿವೇಕವಿತ್ತು - "ಕಳುವಾದ ಚಹಾ ತುಂಬ ಉತ್ತಮ ತರಹದ್ದಾಗಿತ್ತು. ಅದು ಅಷ್ಟು ಒಳ್ಳೆಯದೂಂತ ಕಳ್ಳರಿಗೆ ಹೇಗೆ ಗೊತ್ತಾಯಿತು?"

"ಏನು ಹೇಳ್ತಿದ್ದೀ ನೀನು, ಮೋಂಗ್ಲ?"

"ಅಂದರೆ, ತೋಟದ ಕೆಲಸಗಾರರ ಪೈಕಿ ಯಾರೋ ಕಳ್ಳರ ಜೊತೆಯವರಿರಬೇಕು."

"ಸುರಂಗ ಕೊರೆಯಬೇಕಾದರೆ ತುಂಬ ದಿನಗಳು ಹಿಡಿಯುತ್ತೆ," ಈಗ ಅಲಕಾ ಹೇಳಿದಳು. "ಕೊರೆದು ತೆಗೆದ ಮಣ್ಣನ್ನೂ ಕೂಡ ಬೇರೆ ಎಲ್ಲಿಗೋ ಸಾಗಿಸಬೇಕು. ಅವರು ಅಗೆಯುತ್ತಿರೋದನ್ನು ಯಾರೂ ನೋಡಲಿಲ್ಲಾಂದ್ರೆ ತುಂಬ ವಿಚಿತ್ರ."

"ಅವರು ರಾತ್ರಿ ಹೊತ್ತೇ ಕೆಲಸ ಮಾಡ್ತಿದ್ರು ಅಂತ ಸ್ಪಷ್ಟವಾಯಿತು," ರಾಜವೀರ್ ಆವೇಶದಲ್ಲಿ ನುಡಿದ.

ಮೋಂಗ್ಲನ ತಲೆಗೆ ಇನ್ನೊಂದು ವಿಷಯ ಹೊಳೀತು. "ಅರೆ, ಬಾಬಾ," ಅವನು ಸುಮಾರಾಗಿ ಕಿರುಚಿದಂತೆಯೇ ಹೇಳಿದ. "ಅವನೇ ಇರಬೇಕು!"

"ಹುಶ್," ಉಳಿದವರು ಒಟ್ಟಿಗೆ ಅವಸರದಿಂದ ಎಚ್ಚರಿಸಿದರು.

"ಅವನೇ, ಸಾವನಾ ಅನ್ನೋ ಸರ್ದಾರ. ಕಳ್ಳರ ಜೊತೆ ಅವನೇ ಇರಬೇಕು."

"ತನ್ನ ಎತ್ತನ್ನು ಚಿರತೆ ಎಳಕೊಂಡು ಹೋಯ್ತು ಅಂದವನಾ?" ಪ್ರಾಂಜಲ್ ಪ್ರಶ್ನಿಸಿದ.

"ಓಹೊ, ನಿಮಗೂ ಚಿರತೆ ವಿಷಯ ಗೊತ್ತಾ? ಚಿರತೆ ಕಥೇನ ಹೇಳಿ ಕೆಲಸಗಾರರೆಲ್ಲ ಹೆದರಿಕೊಂಡು ರಾತ್ರಿ ಹೊತ್ತು ಮನೇಲೇ ಇರೋ ಹಾಗೆ ಮಾಡಿದೋನು ಅವನೇ. ಬೇರೆ ಯಾರೂ ಇದುವರೆಗೆ ಚಿರತೇನ ಕಂಡಿಲ್ಲ."

"ಹೌದು. ಅದನ್ನೇ ಡ್ಯಾಡಿನೂ ಹೇಳಿದ್ರು. ಚಿರತೆ ಬಂದಿತ್ತು ಅಂತ ಹೇಳಕ್ಕೆ ಕಾಲಿನ ಗುರುತುಕೂಡ ಒಂದೂ ಕಾಣಿಸಿಲ್ಲ."

ಮೋಂಗ್ಲ ಈಗ ಸೂಚಿಸಿದ - "ಬಹುಶಃ ಚಿರತೆ ಯಾವುದೂ ಇರಲೇ ಇಲ್ಲ. ಯಾರೂ ಅಡ್ಡಿಯಾಗದೆ ಕಳ್ಳರು ಸುರಂಗ ತೋಡಲಿ ಅಂತ ಸಾವನಾ ಆ ಕಥೆಯನ್ನು ಹಬ್ಬಿಸಿದ."

ಎಲ್ಲರೂ ಆಲೋಚನೆಯಲ್ಲಿ ಮುಳುಗಿ, ಮೌನವಿತ್ತು.

"ಅಲ್ಲದೆ" ಮೋಂಗ್ಲ ತನ್ನ ಮಾತಿಗೆ ರುಜುವಾತಿನಂತೆ ತಿಳಿಸಿದ - "ಕಾರ್ಖಾನೆಯಲ್ಲಿ ಪೆಟ್ಟಿಗೆಗಳಿಗೆ ತುಂಬಿಸೊ ಯಂತ್ರದ ಹತ್ತಿರವೇ ಸಾವನಾ ಕೆಲಸ ಮಾಡೋದು. ಯಾವಾಗ ಯಾವ ತರಹದ ಟೀಯನ್ನು ತುಂಬಿಸ್ತಾರೆ ಅನ್ನೋದು ಅವನಿಗೆ ಗೊತ್ತಿರುತ್ತೆ."

# 7

ಮಾರನೆಯ ಬೆಳಿಗ್ಗೆ ಬರುವಾ ಅವರು ಹುಡುಗರನ್ನೆಲ್ಲ ಕಾರ್ಖಾನೆಗೆ ಕರೆದುಕೊಂಡು ಹೋದರು.

ಜೀಪಿನಲ್ಲಿ ಹೋಗುತ್ತಿದ್ದಂತೆ ರಾಜವೀರ್ ನುಡಿದ - "ಇಷ್ಟು ಹಸಿರಾಗಿರೋ ಎಲೆ ನಾವು ಚಹಾ ಮಾಡುವ ಕಪ್ಪು ಅಥವಾ ಚಿನ್ನಗಂದು ಬಣ್ಣಕ್ಕೆ ತಿರುಗುವುದು ಒಂದು ಪವಾಡ ಅನ್ನಿಸುತ್ತೆ."

"ನಿಜವಾಗಿ ಮಾಡುವುದು ಅಂದರೆ ಹಸಿರು ಎಲೆಯಿಂದ ಅದರ ತೇವಾಂಶವನ್ನೆಲ್ಲ ಪೂರ್ತಿಯಾಗಿ ತೆಗೆದು ಅದರ ಬಣ್ಣ ಮತ್ತು ಪರಿಮಳ ಬರುವಂತೆ ಮಾಡುವುದು. ಯಾವ ರಾಸಾಯನಿಕ ವಸ್ತುವನ್ನೂ ಸೇರಿಸುವುದಿಲ್ಲ. ಕೆಲಸ ಬೇಗ ಆಗಿ, ಗುಣ ಉತ್ತಮವಾಗಿದ್ದು ಹೆಚ್ಚು ಪ್ರಮಾಣದಲ್ಲಿ ಚಹಾ ಸೊಪ್ಪು ಮಾರಾಟಕ್ಕೆ ಸಿಕ್ಕುವಂತೆ, ಯಂತ್ರಗಳನ್ನೂ ಬಳಸುತ್ತೇವೆ. ಬೇಕಾದರೆ ನೀವು ಮನೆಯಲ್ಲೇ ಇದನ್ನು ತಯಾರಿಸಬಹುದು."

"ಮನೆಯಲ್ಲಿ? ಹೇಗೆ?" ರಾಜವೀರ್‌ಗೆ ಕುತೂಹಲ.

"ಯಾಕಾಗಲ್ಲ? ಅಂದ್ರೆ ಅದು ಸ್ವಲ್ಪ ಒರಟು ವಿಧಾನ. ಹಳೆಕಾಲದಲ್ಲಿದ್ದ ಹಾಗೆ."

"ಮಾಮಾ, ಇದೆಲ್ಲ ಹಸಿರು ಟೀ ವಿಷಯ ಆಯಿತು. ಇನ್ನೆರಡು ತರಹ ಅಂತ ನೀವು ಹೇಳಿದಿರಲ್ಲ - ಹಳೆಯ ಸಾಂಪ್ರದಾಯಿಕ ಮತ್ತು ಸಿ.ಟಿ.ಸಿ. ಅಂತ. ಅವು ತುಂಬ ಬೇರೆ ತರಹಾನಾ?"

"ಹೌದು. ಹಳೆರೂಢಿಯ ಚಹಾ ಇನ್ನೂ ಒಳ್ಳೆ ರುಚಿ, ಪರಿಮಳ ಕೊಡುತ್ತೆ. ಸಿ.ಟಿ.ಸಿ.ಯಲ್ಲಿ ಹೆಚ್ಚು ಕಷಾಯ ಸಿಕ್ಕುತ್ತೆ. ರೂಢಿ ಟೀಯನ್ನು ಮಾಡುವಾಗ ಕುದಿಸುತ್ತಾರೆ. ಸಿ.ಟಿ.ಸಿ.ಯನ್ನು ಶೋಧಿಸ್ತಾರೆ. ಅವೆರಡರ ವ್ಯತ್ಯಾಸವನ್ನು ಕಾರ್ಖಾನೆಯಲ್ಲಿ ತೋರಿಸ್ತೇನೆ."

ಕಾರ್ಖಾನೆ. ಗೇಟಿನ ಬಳಿ ಅವರು ಬಂದಾಗ ಅಲ್ಲಿದ್ದ ದ್ವಾರಪಾಲಕ ಠೀಕಾಗಿ ಸಲಾಂ ಮಾಡಿದ. ಬರುವಾ ಅವರು ಗೋಡೆಗಳೇ ಇಲ್ಲದೆ ಉದ್ದನೆ ಛಾವಣಿಯಿದ್ದ ಕಟ್ಟಡದ ಬಳಿ ಜೀಪನ್ನು ನಿಲ್ಲಿಸಿದರು. ಅದರಲ್ಲಿ ಐದಾರು ಅಂತಸ್ತುಗಳಲ್ಲಿ ವೇದಿಕೆಗಳಿದ್ದುವು.

"ಇವುಗಳನ್ನು 'ಚಾಂಗ್' ಎನ್ನುತ್ತಾರೆ. ತೋಟದಲ್ಲಿ ಕಿತ್ತ ಹಸಿರೆಲೆಗಳನ್ನು ಇಲ್ಲಿ ತೂಕ ಮಾಡಿ ಈ ಚಾಂಗ್‌ಗಳ ಮೇಲೆ ಹರಡುತ್ತಾರೆ. ಕೆಲವೇ ಗಂಟೆಗಳಲ್ಲಿ ಅವು ಒಣಗಲು ಪ್ರಾರಂಭವಾಗುತ್ತದೆ. ಅವುಗಳಲ್ಲಿನ ತೇವಾಂಶ ಶೇಕಡ 30 ರಿಂದ 40 ರಷ್ಟು ಇಲ್ಲಿ ಒಣಗಿ ಹೋಗುತ್ತದೆ. ಇದು ಬಾಡಿಸುವ ಸಹಜ ರೀತಿ."

ಹತ್ತಿರದಲ್ಲಿ ಇದೇ ರೀತಿಯ ಇನ್ನೊಂದು ಷೆಡ್ ಇತ್ತು. ಇದರಲ್ಲಿ, ಗೋಣಿತಾಟು ಹೊದಿಸಿದ ಅಟ್ಟಗಳ ಬದಲು ಸಿಮೆಂಟಿನ ತೊಟ್ಟಿಗಳಿದ್ದುವು. ಅವುಗಳಲ್ಲಿ ಗಟ್ಟಿಯಾದ ತಂತಿ ಬಲೆಗಳ ಮೇಲೆ ಚಹಾಎಲೆಗಳು ಹರಡಿದ್ದುವು. ಸಿಮೆಂಟ್ ತೊಟ್ಟಿಗಳ ತುದಿಗಳಲ್ಲಿ ವಿದ್ಯುತ್ ಬೀಸಣಿಗೆಗಳು ತಿರುಗುತ್ತಿದ್ದವು.

ಬರುವಾ ವಿವರಿಸಿದರು - "ಇದು ಹತೋಟಿಯಲ್ಲಿ ಒಣಗಿಸುವ ವಿಧಾನ. ಸಹಜ ರೀತಿಯಲ್ಲಿ ತಾನಾಗಿ ಒಣಗಲು ದೀರ್ಘಕಾಲ ಬೇಕಾಗುತ್ತದೆ. ತೇವದ ಹವಾಗುಣದಲ್ಲಂತೂ ಇನ್ನೂ ಹೆಚ್ಚು ಕಾಲ. ಅದರಿಂದ ಈ ಸಿಮೆಂಟ್ ತೊಟ್ಟಿಗಳ ಮೂಲಕ ನಿರ್ದಿಷ್ಟ ಕಾವಿನಲ್ಲಿರುವ ಬಿಸಿಗಾಳಿಯನ್ನು ಕಳಿಸುತ್ತೇವೆ."

ಮಕ್ಕಳು ಬರುವಾ ಅವರ ಹಿಂದೆ ಕಾರ್ಖಾನೆಯೊಳಕ್ಕೆ ಹೋದರು. ಒಳಗೆ ಹತ್ತಾರು ಯಂತ್ರಗಳ ಕಟ-ಕಟ ಶಬ್ದ ತುಂಬಿತ್ತು. ಇನ್ನೊಬ್ಬರಿಗೆ ಕೇಳಿಸಬೇಕಾದರೆ ಗಟ್ಟಿಯಾಗಿ ಮಾತಾಡಬೇಕಿತ್ತು. ನಜ್ಜುಗುಜ್ಜು ಮಾಡಿದ ಟೀ ಎಲೆಗಳ ಜೋರು ವಾಸನೆ ಮೂಗಿಗೆ ಬಡಿಯಿತು.

ಮೂರು ಕಾಲಿನ ಯಂತ್ರವೊಂದನ್ನು ತೋರಿಸಿ ಬರುವಾ ಹೇಳಿದರು - "ಈ ಹೊರಳಿಸುವ ಮೇಜಿನಲ್ಲಿ ಎಲೆಗಳು ತಿರುಗಿಸಿ ಹಿಸುಕಿದಾಗ ರಸವೆಲ್ಲ ಈಚೆ ಬಂದು ಒಂದೇ ಸಮನಾದ ಮಿಶ್ರಣ ಆಗುತ್ತದೆ."

ಅನಂತರ ಅವುಗಳನ್ನು ಶೋಧಿಸಲು ತಂತಿ ಬಲೆಯ ಜಾಲಕವನ್ನು ಹೊಂದಿ ಸದಾ ತಿರುಗುತ್ತಿದ್ದ ನಳಿಗೆಗಳನ್ನುಳ್ಳ ಯಂತ್ರಕ್ಕೆ ಬಿಡುತ್ತಿದ್ದರು.

ಬರುವಾ ಮುಂದುವರಿಸಿದರು - "ಇದು ಒಂದು ಚರಂಡಿ. ನಯವಾಗಿ ಉರುಳೆಯಾದ ಚಹಾ ಇಲ್ಲಿ ಪ್ರತ್ಯೇಕಿಸಲ್ಪಡುತ್ತದೆ. ಇಲ್ಲಿ ರೂಢಿಯ ಚಹಾ ಮತ್ತು ಸಿ.ಟಿ.ಸಿ. ನಮೂನೆಗಳಿಗೆ ವಿಧಾನಗಳು ಬೇರೆ ಬೇರೆ. ರೂಢಿಯಚಹಾ ಮಾಡಲು ಈಗ ಸೋಸಿದ ಟೀಯನ್ನು ಸೀದಾ ಹುದುಗಿನ ಕೋಣೆಗೆ ಸಾಗಿಸುತ್ತೇವೆ. ಸಿ.ಟಿ.ಸಿ. ನಮೂನೆ ಬೇಕೆಂದರೆ ಅದನ್ನು

ಮೊದಲು ಇನ್ನೊಂದು ಯಂತ್ರಕ್ಕೆ ಕಳಿಸಬೇಕು."

"ಮಾಮಾ, ಸಿ.ಟಿ.ಸಿ. ಅಂತೀರಲ್ಲ, ಏನದು?"

"ಇಂಗ್ಲೀಷ್‌ನಲ್ಲಿ ಕರ್ಲಿಂಗ್, ಟೇರಿಂಗ್ ಮತ್ತು ಕ್ರಷಿಂಗ್ ಎನ್ನುತ್ತಾರೆ. ಎಲೆಗಳನ್ನು ಸುತ್ತಿಸಿ, ಹರಿದು, ನಜ್ಜುಗುಜ್ಜು ಮಾಡುವುದು. ಅದನ್ನು ಸಿ.ಟಿ.ಸಿ. ಯಂತ್ರ ಮಾಡುತ್ತವೆ."

ಅತಿ ಸಣ್ಣ ಚೂರುಗಳುಳ್ಳ ತಿಳ್ಳಿನಂಥ ಪದಾರ್ಥ ಯಂತ್ರದ ಬಾಯಿಯಿಂದ ಜಿನುಗಿ ಬಂದು ಮುದ್ದೆಮುದ್ದೆಯಾಗಿ ಅಲ್ಯುಮಿನಿಯಂ ತಟ್ಟೆಗಳಲ್ಲಿ ಬಿತ್ತು.



"ಈಗ ನೀವು ನೋಡಿದ ಹಾಗೆ, ಸಿ.ಟಿ.ಸಿ. ವಿಧಾನದಲ್ಲಿ ಎಲೆಗಳನ್ನು ಪೂರ್ತಿಯಾಗಿ ಹರಿದು ಬಿಟ್ಟು ರಸವನ್ನು ಹಿಂಡಿ ಒಂದೇ ಸಮನಾಗಿರುವಂತೆ ಮಿಶ್ರ ಮಾಡುತ್ತೇವೆ. ಆದರಿಂದ ಬಣ್ಣ ಸ್ಪಷ್ಟವಾಗುತ್ತೆ. ಸಾಂಪ್ರದಾಯಿಕ ಚಹಾದಲ್ಲಿ ಎಲೆಗಳನ್ನು ಕತ್ತರಿಸಲ್ಲ. ರಸ ನಿಧಾನವಾಗಿ ಹೊರಬರುತ್ತೆ. ಹಾಗಾಗಿ ರುಚಿ ಉಳಿಯುತ್ತೆ."

ಅಲ್ಲಿಂದ ಅವರು ಹುದುಗಿನ ಕೋಣೆಗೆ ಹೋದರು. ಅಲ್ಲಿ ಬಾನೆಗಳ ಮೇಲೆ ಎಲೆಗಳನ್ನು ಹರಡಿತ್ತು. ಸಹಜವಾದ ರೀತಿಯಲ್ಲಿ ಹುದುಗುತ್ತಿತ್ತು. ರಾಜವೀರ್ ಚಕಿತನಾಗಿ ನೋಡುತ್ತಿದ್ದಂತೆಯೇ ಎಲೆಗಳು ತಮ್ಮ ಹಸಿರು ಬಣ್ಣವನ್ನು ಕಳೆದುಕೊಂಡು ಕಂದು ಬಣ್ಣಕ್ಕೆ ತಿರುಗಿದ್ದುವು.

ಬರುವಾ ಒಳ್ಳೆಯ ಉಪಾಧ್ಯಾಯರಂತೆ ವಿವರಿಸಿದರು - "ಹುದುಗಿನ ಕ್ರಮ ಪೂರ್ತಿ ಆಗಲು ಸುಮಾರು ಒಂದು ಗಂಟೆ ಹಿಡಿಯುತ್ತೆ. ನೀನು ಹೇಳಿದ ಪವಾಡ ಇಲ್ಲೇ ನಡೆಯೋದು. ಆಮ್ಲಜನಕ ಸಂಯೋಗದಿಂದ ಹಸಿರು ಬಣ್ಣ ಮಾಯವಾಗುತ್ತೆ. ವಾತಾವರಣದಲ್ಲಿರುವ ಆಮ್ಲಜನಕ ಎಲೆಗಳಲ್ಲಿರುವ ರಾಸಾಯನಿಕಗಳೊಡನೆ ಪ್ರತಿಕ್ರಿಯೆ ನಡೆಸಿ ಬಣ್ಣ ಮತ್ತು ವಾಸನೆಯನ್ನು ಬದಲಾಯಿಸುತ್ತೆ."

ಅಲ್ಲಿಂದ ಒಣಗಿಸುವ ಕೋಣೆಗೆ ಹೋದರು. ಅದರಲ್ಲಿ ದೊಡ್ಡ ಯಂತ್ರಗಳಿದ್ದುವು. ಇದ್ದಿಲಿನ ಅಥವಾ ಎಣ್ಣೆ ಕುಲುಮೆಗಳಿಂದ ವಿಪರೀತ ಬಿಸಿಯಾದ ಗಾಳಿಯನ್ನು ಹುದುಗು ಬಂದ ಎಲೆಗಳ ಮೇಲೆ ಹಾಯಿಸುತ್ತಿದ್ದರು.

"ಬಿಸಿಗಾಳಿ ಎಲೆಗಳಲ್ಲಿ ಉಳಿದಿರುವ ತೇವವನ್ನು ತೆಗೆದು ನಮ್ಮ ಸಿದ್ಧವಸ್ತುವನ್ನು ಗರಿಗರಿಯಾಗಿ ಒಣಗಿಸಿಡುತ್ತೆ. ಇದರ ವಾಸನೆ ನೋಡಿ," ಬರುವಾ ಅವರು ಒಂದು ಹಿಡಿ ಟೀ ಎಲೆಯನ್ನು ತೆಗೆದು ರಾಜವೀರ್‌ಗೆ ಸ್ವಲ್ಪ ಕೊಟ್ಟರು. ಬೆಚ್ಚಗಿತ್ತು, ಜೊತೆಗೆ ಹಿತವಾದ ಪರಿಮಳ.

ಬರುವಾ ಮುಂದೆ ಹೇಳಿದರು - "ಇನ್ನು ಉಳಿದ ಕೆಲಸ ಅಂದರೆ ಚಹಾವನ್ನು ಆರೆಂಜ್ ಪೆಕೊ, ಪೆಕೊ ಧೂಳು, ಆರೆಂಜ್ ಪೆಕೊ ಪುಡಿ ಮುಂತಾಗಿ ಬೇರೆಬೇರೆ ದರ್ಜೆಗಳಿಗೆ ವಿಂಗಡಿಸಿ ಪ್ಯಾಕ್ ಮಾಡುವುದು. ತಂತಿ ಜಾಲರಿ ಹೊಂದಿ ಚೂಪು ತುದಿಯಿರುವ ಈ ಲಾಳಿಕೆ ಯಂತ್ರಗಳಲ್ಲಿ ವಿಂಗಡಿಸೋ ಕೆಲಸ ಆಗುತ್ತೆ. ಬೇರೆ ಬೇರೆ ಗಾತ್ರ, ಆಕಾರಗಳ ಜಾಲರಿಗಳನ್ನು ಬಳಸಿ ಅನೇಕ ದರ್ಜೆಗಳಿಗೆ ಚಹಾ ವಿಂಗಡಿಸುತ್ತಾರೆ."

ಕಡೆಗೆ ಟೀಯನ್ನು ಪೆಟ್ಟಿಗೆಗಳಲ್ಲಿ ತುಂಬುವ ಕೊಠಡಿಗೆ ಬಂದರು. ಮುಳ್ಳು ಮುಖದ ಕುರೂಪಿ ದಢಿಯ ಒಬ್ಬ ಅಲ್ಲಾಡಿಸುವ ಕಂಪಕಗಳ ಮೇಲಿದ್ದ ಪೆಟ್ಟಿಗೆಗಳೊಳಕ್ಕೆ ಟೀಯನ್ನು ಮೊರಗುದ್ದಲಿಯಿಂದ ಸುರಿಯುತ್ತಿದ್ದ.

ಮೋಂಗ್ಲ ತಿಳಿಸಿದ್ದ ವರ್ಣನೆಯಿಂದ ಮಕ್ಕಳು ಅವನನ್ನು ಗುರುತು ಹಿಡಿದರು.

ಅವನೆ ಸಾವನಾ. ಕಾರ್ಖಾನೆಯಲ್ಲಿ ಪ್ಯಾಕ್ ಮಾಡುತ್ತಿದ್ದ ಚಹಾ ಯಾವ ದರ್ಜೆಯದೆಂಬುದನ್ನು ತಿಳಿದುಕೊಳ್ಳಲು ಅವನು ಬಲು ಅನುಕೂಲವಾದ ಸ್ಥಳದಲ್ಲೇ ಇದ್ದ.

ಮಕ್ಕಳ ಗಮನ ಬೇರೆಲ್ಲೋ ತಿರುಗಿತ್ತೆಂಬುದನ್ನು ತಿಳಿಯದ ಬರುವಾ ಹೇಳುತ್ತಲೇ ಇದ್ದರು - "ತೇವ ಅನ್ನೋದು ಟೀ ಎಲೆಗೆ ಬಲು ಕೆಟ್ಟ ವೈರಿ. ಈ ಪ್ಯಾಕಿಂಗ್ ಯಂತ್ರ ಎಡಬಿಡದೆ ಕಂಪಿಸುತ್ತಲೇ ಇರುವುದರಿಂದ ಪೆಟ್ಟಿಗೆಗಳಲ್ಲಿ ಮಧ್ಯೆ ಎಲ್ಲೂ ಗಾಳಿ ತುಂಬಿಕೊಳ್ಳದೆ ಟೀ ಎಲೆಯೇ ತುಂಬಿಕೊಂಡಿರೊ ಹಾಗೆ ಮಾಡುತ್ತೆ. ಪೆಟ್ಟಿಗೆಗಳ ಒಳಗಡೆ ಪಕ್ಕದಲ್ಲೆಲ್ಲಾ ಅಲ್ಯು ಮಿನಿಯಂ ತಗಡು ಇರುವುದರಿಂದ ಅದೂ ತೇವ ಬರದ ಹಾಗೆ ತಡೆಯುತ್ತೆ."

ಪೆಟ್ಟಿಗೆಗಳು ತುಂಬುತ್ತಿದ್ದಂತೆಯೇ ಒಬ್ಬ ಕೆಲಸಗಾರ ಅವುಗಳ ಮೇಲೆ ಮುಚ್ಚಳಗಳನ್ನಿಟ್ಟು ಮೊಳೆಗಳನ್ನು ಹೊಡೆಯುತ್ತಿದ್ದ. ಆಮೇಲೆ ಆ ಪೆಟ್ಟಿಗೆಯ ಮೇಲೆ ತೋಟದ ಹೆಸರು, ಟೀ ಪುಡಿಯ ದರ್ಜೆ ಮುಂತಾದುವನ್ನು ಬರೆಯುತ್ತಿದ್ದರು.

"ಸಿದ್ಧ ಮಾಡಿದ ಚಹಾ ಎಲೆ ಒಳ್ಳೆಗುಣದ್ದು ಅನ್ನುವುದನ್ನು ಖಾತರಿ ಮಾಡಿಕೊಳ್ಳಲು ಅದರ ಸ್ವಲ್ಪ ಸ್ವಲ್ಪ ಸ್ಯಾಂಪಲ್‌ಗಳನ್ನು ಪ್ರತಿ ದಿನವೂ ತೆಗೆದುಕೊಂಡು ಕಾರ್ಖಾನೆಯಲ್ಲಿ ರುಚಿ ಪರೀಕ್ಷಿಸುತ್ತೇವೆ," ಬರುವಾ ತಿಳಿಸಿದರು. "ಒಂದೇ ಗುಟುಕು ಕುಡಿದರೂ, ಆ ಚಹಾ ಚೆನ್ನಾಗಿದೆಯೇ, ಹುದುಗು ಜಾಸ್ತಿಯಾಯಿತೇ, ಒಣಗಿದ್ದು ಸಾಲದೇ - ಅಂತ ಹೇಳಬಲ್ಲೆ."

ಒಳಗಿರುವಷ್ಟು ಹೊತ್ತೂ ಯಂತ್ರಗಳ ಎಡಬಿಡದ ಗುಡುಗುಡು ಶಬ್ದ ಕೇಳಿ ಅದಕ್ಕೆ ಒಗ್ಗಿಹೋಗಿದ್ದರಿಂದ ಅವರು ಕಾರ್ಖಾನೆಯಿಂದ ಹೊರಕ್ಕೆ ಬಂದಾಗ ಹೊರಗಿನ ನಿಶ್ಶಬ್ದ ವಿಚಿತ್ರವಾಗಿ ಕಂಡಿತು.

ಅವರು ಜೀಪಿನಲ್ಲಿ ಕೂತು ಹೊರಟಂತೆ ಬೆಳಗಿನ ವಿರಾಮ ವೇಳೆಯನ್ನು ಸೂಚಿಸುವ ಕಾರ್ಖಾನೆ ಸೀಟಿ ಊದಿತು.



# 8

ತೋಟದ ಕಾರ್ಮಿಕರ ಕೆಲಸ ಮಧ್ಯಾಹ್ನ 4 ಗಂಟೆಗೆ ಮುಗಿಯುತ್ತಿತ್ತು. ಅಂದು ಮಕ್ಕಳು ಮೋಂಗ್ಲನ ಜೊತೆಯಲ್ಲಿ ಕಾರ್ಮಿಕರು ವಾಸಿಸುತ್ತಿದ್ದ ಕೇರಿಗೆ ಹೋದರು.

ಹುಲ್ಲು ಛಾವಣಿಯ ಗುಡಿಸಿಲುಗಳ ಉದ್ದನೆ ಸಾಲುಗಳು. ಪ್ರತಿಯೊಂದರ ಮುಂದೂ ಒಂದಷ್ಟು ಆವರಣದ ಜಾಗ. ಅಲ್ಲಲ್ಲಿ ಒಂದೊಂದರಂತೆ ಎಲ್ಲರೂ ನೀರು ಪಡೆಯಬಹುದಾದ ಸಮುದಾಯ ಬಾವಿಗಳು. ಅವುಗಳ ಹತ್ತಿರ ಹರಟೆಯಲ್ಲಿದ್ದ ಹೆಂಗಸರ ಗುಂಪುಗಳು. ಎಳೆಯ ಚಿಣ್ಣರೂ ಇತರ ಹುಡುಗರೂ ಸುತ್ತಲೂ ಕುಣಿದಾಡುತ್ತಾ ಆಡುತ್ತಿದ್ದರು. ಧೂಳಿನ ರಸ್ತೆಯ ಮೇಲೆ ಕೊಳಕು ನಾಯಿಗಳು ಮಲಗಿದ್ದುವು. ಒಂದೆಡೆ ಹಂದಿಗಳ ಗುಂಪು ಕೆಸರಿನಲ್ಲಿ ಒದ್ದಾಡುತ್ತಿತ್ತು.

ಕಾರ್ಮಿಕರ ಸಂಘದ ಪಕ್ಕದಲ್ಲಿದ್ದ ಬಯಲಿನಲ್ಲಿ ಕೆಲವು ಯುವಕರು ಕಾಲ್ಚೆಂಡಿನಾಟ ಪ್ರಾರಂಭಿಸಿದ್ದರು. ಬೇಕಾದಷ್ಟು ಗುಡಿಸಲುಗಳಿಂದ ರೇಡಿಯೋ ಸಂಗೀತ ಕೇಳುತ್ತಿತ್ತು.

ಮೋಂಗ್ಲ ಹೇಳಿದ - "ನಮಗೆ ಹಾಡು, ಕುಣಿತ ಅಂದ್ರೆ ಬಲು ಇಷ್ಟ. ಸಾಧ್ಯವಾದಾಗಲೆಲ್ಲ ಮಜಾ ಮಾಡ್ತೇವೆ."

ಒಂದು ಗುಡಿಸಿಲಿನ ಬಳಿ ಹೆಚ್ಚಿನ ಚಟುವಟಿಕೆಯಿತ್ತು. ಮಕ್ಕಳು ಅಲ್ಲೆ ನಿಂತರು. ಬಾಗಿಲ ಬಳಿಯೆಲ್ಲ ಕಾಗದದ ಹೂವುಗಳ ಅಲಂಕಾರ. ಗಂಡಸರು, ಹೆಂಗಸರು, ಮಕ್ಕಳು ಎಲ್ಲರೂ ನೆಲದ ಮೇಲೆ ಅರ್ಧವೃತ್ತಾಕಾರದಲ್ಲಿ ಕೂತು ಹಾಡುತ್ತಿದ್ದರು. ಐದಾರು ಹೆಣ್ಣು ಮಕ್ಕಳು ಒಬ್ಬರೊಬ್ಬರ ಸೊಂಟಗಳನ್ನು ಬಳಸಿಹಿಡಿದು ಆ ಇಂಪಾದ ಹಾಡಿಗೆ ತಕ್ಕಂತೆ ಮೈಯಾಡಿಸುತ್ತಿದ್ದವು. ಅವರ ಕಾಲುಗಳು ಜಟಿಲವಾದ ಚಿತ್ರವನ್ನು ನೇಯುತ್ತಿದ್ದುವು.

"ಅವರು ಝುಮರ್ ನೃತ್ಯ ಮಾಡುತ್ತಿದ್ದಾರೆ," ಮೋಂಗ್ಲ ತಿಳಿಸಿದ. "ನಮ್ಮ ಅನೇಕ ಹಬ್ಬಗಳಲ್ಲಿ ಝುಮರ್ ಗೀತೆ ಹಾಡಿ ಕುಣಿಯುತ್ತೇವೆ. ತುಷು ಪೂಜೆ ಮತ್ತು ಕರಂ

ಪೂಜೆಗಳೂ ನಮಗೆ ಹಬ್ಬ. ಜೊತೆಗೆ ಅಸ್ಸಾಮಿನ ಬಿಹು, ಹೋಳಿ ಮತ್ತು ಕಾಳೀ ಪೂಜೆ ದಿನಗಳೂ ನಮಗೆ ಹಬ್ಬಗಳಾಗಿವೆ."

"ಅವರೆಲ್ಲ ಈಗ ಯಾಕೆ ನೃತ್ಯ ಮಾಡ್ತಿದಾರೆ?" ರಾಜವೀರ್ ಕೇಳಿದ.

"ಅದಾ? ಇನ್ನೊಂದು ವಾರದಲ್ಲಿ ಯಾರಿಗೋ ಮದುವೆ ಆಗುತ್ತೆ. ಆಗಲೇ ಅದರ ಉತ್ಸವಗಳು ಪ್ರಾರಂಭವಾಗಿವೆ."

ಕೇರಿಯ ಕಡೆಯಲ್ಲಿ ಸಾವನಾನ ಗುಡಿಸಿಲು. ಮೊದಲೇ ಆಲೋಚಿಸಿದ್ದಂತೆ ಮೋಂಗ್ಲ ಹೊರಗಡೆಯೇ ಸ್ವಲ್ಪ ದೂರದಲ್ಲಿ ನಿಂತು ಪ್ರಾಂಜಲ್ , ರಾಜವೀರ್ ಮತ್ತು ಅಲಕಾ ಒಳಗೆ ಹೋದರು.

ಅವರನ್ನು ಎದುರ್ಗೊಳ್ಳಲು ಸಾವನಾ ಮುಂದೆ ಬಂದ. ಮೋಡಾಗಳನ್ನು ಇಟ್ಟು ಅವರನ್ನು ಕೂರಿಸಿದ.

"ನಿನ್ನ ಎತ್ತನ್ನು ಎಳೆದುಕೊಂಡು ಹೋದ ಚಿರತೆ ವಿಚಾರ ನಾವೆಲ್ಲ ಕೇಳಬೇಕು," ಎಂದು ಪ್ರಾಂಜಲ್ ಹೇಳಿದ.

ಸಾವನಾನಿಗೆ ಯಾಕೋ ಇರುಸುಮುರುಸು. ತಾನು ನೋಡಿದ್ದನ್ನು ನೆನಪು ಮಾಡಿಕೊಳ್ಳು ವುದಕ್ಕೋ ಎಂಬಂತೆ ಮುಖವನ್ನು ಬಿಗಿಮಾಡಿದ.

"ಅದಾ? ಆಗಿಹೋಗಿ ಹದಿನೈದು ದಿನಗಳೇ ಮುಗಿದುವು. ಆವತ್ತು ತುಂಬ ಕತ್ತಲ ರಾತ್ರಿ . ಮಳೆ ಬೇರೆ. ಮಧ್ಯರಾತ್ರಿ ಸುಮಾರಿನಲ್ಲಿ ಹಿತ್ತಲಕಡೆ ಕೊಟ್ಟಿಗೆಯಿಂದ ಎತ್ತುಗಳು ಹುಚ್ಚುಹುಚ್ಚಾಗಿ ಕೂಗಿದುವು. ಅಲ್ಲಿ ಎರಡು ಎತ್ತುಗಳನ್ನು ಕಟ್ಟಿದ್ದೆ. ಕೈಯಲ್ಲಿ ಮಚ್ಚು ಹಿಡಿದು ಈಚೆ ಬಂದೆ. ಕಣ್ಣೆದುರಿಗೆ ಏನೂಂತೀರಿ? ಭಾರಿ ಚಿರತೆ! ಒಂದು ಎತ್ತನ್ನು ಕತ್ತಿನ ಹತ್ತಿರ ಹಿಡಿದು ಎಳಕೊಂಡು ಹೋಗುತ್ತಿತ್ತು."

"ನಿನ್ನ ಹತ್ರ ದೀಪ ಇತ್ತಾ?" ರಾಜವೀರ್ ಕೇಳಿದ.

"ಇಲ್ಲ. ಮನೆಲಿರೋ ಸಣ್ಣ ಸೀಮೆಎಣ್ಣೆ ಬುಡ್ಡಿಗಳು ಅಂಥ ರಾತ್ರೀಲಿ ಏನೂ ಪ್ರಯೋಜನ ಇರಲ್ಲ."

"ಅದು ಚಿರತೆ ಅಂತ ನಿನಗೆ ಖಂಡಿತಾನಾ?" ಪ್ರಾಂಜಲ್ ಪ್ರಶ್ನೆ ಮಾಡಿದ. "ಬಿಳಿ ಬಂಗಾಳ ಹುಲಿ ಯಾಕಾಗಿರ್ಬಾರ್ದು?"

"ಇಲ್ಲ, ಚಿರತೇನೆ. ಚುಕ್ಕೆಗಳು ಸ್ಪಷ್ಟವಾಗಿ ಕಾಣಿಸಿದುವು."

"ಆಮೇಲೆ ಏನು ಮಾಡಿದೆ?"

"ಏನು ಮಾಡಕ್ಕಾಗುತ್ತೆ? ಕತ್ತೆ ಕಿರುಬಗಳನ್ನಾದರೆ ಕೂಗಿ ಓಡಿಸಬಹುದು. ಆದರೆ ಚಿರತೆಗಳ ಜೊತೆ ಕುಸ್ತಿ ಮಾಡಕ್ಕೆ ನನ್ನ ಕೈಲಾಗಲ್ಲ, ಚಿಕ್ಕ ಬುದ್ಧಿಯೋರೇ.

ಆದರಿಂದ ನಾನು ಏನೋ ಬೊಬ್ಬೆಯಿಡುತ್ತಾ, ಡಬ್ಬ ಬಡಿದು ಗದ್ದಲ ಎಬ್ಬಿಸಿದೆ."

"ಆಮೇಲೆ ಎತ್ತಿನ ಹೆಣ ಸಿಕ್ತಾ?"

"ಇಲ್ಲ, ನಾನು ಅದಕ್ಕೆ ಪ್ರಯತ್ನಪಡಲೇ ಇಲ್ಲ. ಏನು ಪ್ರಯೋಜನ, ಸತ್ತು ಹೋಗಿತ್ತು."

"ಚಿರತೆ ಪಂಜದ ಗುರುತುಗಳನ್ನು ಪರೀಕ್ಷಿಸಲಿಲ್ವಾ?"

"ಇರಲೇಇಲ್ಲ. ಮಳೆ ನೀರಿನಲ್ಲಿ ಕದರಿ ಹೋಗಿತ್ತು."

ಹುಡುಗರು ಗುಡಿಸಿಲಿನ ಹಿಂದೆ ದನದ ಕೊಟ್ಟಿಗೆಗೆ ಹೋದರು. ಸುತ್ತುಮುತ್ತಲೂ ಚೆನ್ನಾಗಿ ಕಣ್ಣಿಟ್ಟು ನೋಡಿದರು.

"ಎಂಥ ಅನ್ಯಾಯ!" ರಾಜವೀರ್ ಉದ್ಗರಿಸಿದ. "ನೀನು ಚಿರತೆ ಜೊತೆ ಹೋರಾಡಿದ ಸಾಹಸದ ಕಥೆ ಕೇಳೋಣಾಂತಿದ್ದೆ. ಸುಮ್ಮನೆ ಅದನ್ನು ಹೆದರಿಸಿ ಓಡಿಸಿ ಬಿಟ್ಟೆಯಲ್ಲಾ? ಇಷ್ಟಾದರೂ ಕೇಳಿದ ಹಾಗಾಯ್ತು. ತುಂಬ ವಂದನೆಗಳು. ಬರ್ತೀವಿ."

ಈಗ ಪ್ರಾಂಜಲ್‌ನನ್ನು ಕುರಿತು ಸಾವನಾ ಹೇಳಿದ - "ಚಿಕ್ಕ ಬುದ್ಧಿಯೋರೇ, ಕಾರ್ಖಾನೇಲಿ ಆದ ಕಳವಿನ ವಿಚಾರ - ನಿಮ್ಮ ತಂದೆಯವರು ಏನಾದರೂ ಹೇಳಿದರಾ?"

"ಹೂ, ಹೇಳಿದರು," ಪ್ರಾಂಜಲ್ ಅವನನ್ನು ನೆಟ್ಟಗೆ ನೋಡುತ್ತ ಜವಾಬು ಕೊಟ್ಟ. ಇವತ್ತು ಬೆಳಿಗ್ಗೆ ಪೋಲಿಸಿನವರು ಟೆಲಿಫೋನ್ ಮಾಡಿದ್ದರು. ಡೇಕ ಮತ್ತು ಬಿರ್ಜೆ ಇಬ್ಬರೂ ತಾವು ಚಹಾ ಕದ್ದಿದ್ದನ್ನು ಒಪ್ಪಿಕೊಂಡಿದ್ದಾರೆ."

"ಒಪ್ಪಿದ್ದಾರೆ!" ಸಾವನಾನಿಗೆ ಆಶ್ಚರ್ಯವಾಯಿತು.

"ಹೌದು. ಇದರ ತನಿಖೆ ಮುಗಿಯಿತೆಂದೂ ಪೋಲಿಸಿನವರು ಹೇಳಿಬಿಟ್ಟಿದ್ದಾರೆ. ಕಳ್ಳರು ಸಿಕ್ಕಿದ್ದಾಗಿರುವುದರಿಂದ ತಂದೆಯವರು ನಾಳೆಯಿಂದ ಉಗ್ರಾಣವನ್ನು ಮತ್ತೆ ಬಳಸುವರಂತೆ. ಕಾರ್ಖಾನೆಯಲ್ಲೇ ಪೇರಿಸಿಡುತ್ತಿರುವ ಟೀ ಪೆಟ್ಟಿಗೆಗಳೆಲ್ಲವನ್ನೂ ಉಗ್ರಾಣಕ್ಕೆ ಸಾಗಿಸುತ್ತಾರೆ."

ಕಿವಿಯಿಂದ ಕಿವಿಯವರೆಗೂ ಬಾಯಿ ಅಗಲಿಸಿರುವಷ್ಟು ಸಂತೋಷದಲ್ಲಿ ಸಾವನಾನನ್ನು ಬಿಟ್ಟು ಅವರೆಲ್ಲ ಹೊರಟರು.

ಸ್ವಲ್ಪ ಹೊತ್ತಿನ ನಂತರ ಅವರನ್ನು ಸೇರಿಕೊಂಡ ಮೋಂಗ್ಲ ಕೇಳಿದ - "ಏನಾದರೂ ಫಲವಿತ್ತೇ?"

"ಸಾವನಾ ಖಂಡಿತವಾಗಿಯೂ ಉಡಾಫೆ ಹೊಡೆಯುತ್ತಿದ್ದಾನೆ," ರಾಜವೀರ್ ಹೇಳಿದ. "ಅದು ಮಳೆಯಿದ್ದ ಕತ್ತಲ ರಾತ್ರಿ. ಕಾಲಿನ ಗುರುತುಗಳು ಮಳೆಯಲ್ಲಿ ಕರಗಿ ಹೋದುವು. ಆದರೂ ಅದು ಖಂಡಿತ ಚಿರತೆಯೆಂದೇ ಹೇಳುತ್ತಾನೆ. ಮೈ ಚುಕ್ಕೆಗಳನ್ನೂ ನೋಡಿದೆ ಎಂದು ಹೇಳುತ್ತಾನೆ!"

"ಹಿತ್ತಲ ಕಡೆ ಎಲ್ಲಾ ನೋಡಿದೆವು," ಪ್ರಾಂಜಲ್ ಉತ್ತರ ಕೊಟ್ಟ. "ಮನೆಸುತ್ತ ಇರುವ ಬಿದಿರ ಬೇಲಿ ತುಂಬ ಹಳೇದು. ಆದರೂ ಎಲ್ಲೂ ಮುರಿದಿಲ್ಲ. ಚೆನ್ನಾಗಿ ಬೆಳೆದ ಎತ್ತು ಅಂದ್ರೆ ದೊಡ್ಡ ಪ್ರಾಣಿ. ಅದನ್ನು ಹಿಡಿದುಕೊಂಡು ಚಿರತೆ ಬೇಲಿ ಮೇಲೆ ಹಾರಕ್ಕಾಗಲ್ಲ. ನಿಜವಾಗ್ಲೂ ಚಿರತೆ ಇದ್ದಿದ್ರೆ ಬೇಲಿ ಮುರಿದಿರ್ತಿತ್ತು."

"ಎತ್ತು ಕಳೆದುಕೊಂಡಿದ್ರೆ ಇಷ್ಟು ಸಂತೋಷದಿಂದಿರ್ತಿದ್ದನಾ?" ಅಲಕಾಳ ಪ್ರಶ್ನೆ. "ಎತ್ತು ಅಂದರೆ ಎಷ್ಟು ದುಡ್ಡಾಗುತ್ತೆ! ತೋಟದ ಕೂಲಿಗಳು ಬಡವರು."

"ಇದೆಲ್ಲ ನಾನಂದುಕೊಂಡಿದ್ದೆ," ಮೋಂಗ್ನ ಸೇರಿಸಿದ. "ಸಾವನಾ ಮೇಲೆ ಕಣ್ಣಿಟ್ಟಿರಬೇಕು."

"ಅದನ್ನೇ ನಾವೂ ಯೋಚನೆ ಮಾಡಿರೋದು," ಪ್ರಾಂಜಲ್ ನುಡಿದ . "ಅವನಿಗೆ ಸ್ವಲ್ಪ ಸುಳ್ಳು ಸಮಾಚಾರ ಕೊಟ್ಟಿದ್ದೇನೆ. ಅದನ್ನ ನಂಬಿ ಕೆಲಸ ಮಾಡ್ತಾನೆ ಅನ್ನೋದನ್ನ ನಾವು ಇವತ್ತು ರಾತ್ರಿ ಇಲ್ಲಿ ಬಂದು ನೋಡಬೇಕು."



# 9

ಸುಮಾರು 11 ಗಂಟೆ ರಾತ್ರಿ. ಪ್ರಾಂಜಲ್ ಮತ್ತು ರಾಜವೀರ್ ಮೆಲ್ಲನೆ ಹಾಸಿಗೆಯಿಂದೆದ್ದು ಮೆಟ್ಟಿಲುಗಳನ್ನು ಇಳಿದರು. ಬಂಗಲೆಯಿಂದೀಚೆ ಬಂದು ಕೊಟ್ಟಿಗೆಯ ಕಡೆಹೋದಾಗ ರಾತ್ರಿಯಲ್ಲಿ ಸರಪಳಿಗೆ ಬಿಗಿಯದೆ ಇದ್ದ ಟ್ಯಾಫಿ ಅವರೊಡನೆ ಸೇರಿತು. ಪ್ರಾಂಜಲ್ ತನ್ನ ಕೈಲ್ಲಿದ್ದ ಟಾರ್ಚನ್ನು ಎರಡು ಸಲಹೊತ್ತಿಸಿ ಆರಿಸಿದ. ಕೂಡಲೇ ಕತ್ತಲಿನಿಂದ ಬಂದ ಮೋಂಗ್ಲ ಪಿಸುಮಾತಿನಲ್ಲಿ ಹೇಳಿದ - "ಜಾಗ್ರತೆ ಬನ್ನಿ. ಬೇಗ ಹೋಗಬೇಕು."

ಮೂವರೂ ಬಿರುಸಾಗಿ ನಡೆದರು. ಕಗ್ಗತ್ತಲು. ಆಕಾಶವೆಲ್ಲ ಕಪ್ಪು ಮೋಡಗಳಿಂದ ಮುಚ್ಚಿಹೋಗಿತ್ತು. ದೂರದಲ್ಲಿ ಆಗಾಗ ಹೊಳೆದ ಮಿಂಚು ಬಿರುಗಾಳಿ, ಮಳೆಯ ಬರವನ್ನು ಸೂಚಿಸುತ್ತಿತ್ತು.

ತೋಟದ ಕಾಲು ದಾರಿಗಳೆಲ್ಲ ರಾತ್ರಿಯಲ್ಲಿ ಒಂದೇ ಬಗೆಯಾಗಿ ಕಾಣಿಸುತ್ತಿದ್ದುವು. ಮೋಂಗ್ಲ ಇಲ್ಲದಿದ್ದರೆ ಹುಡುಗರು ದಾರಿ ತಪ್ಪಿ ಎಲ್ಲೋ ಹೋಗಿರುತ್ತಿದ್ದರು. ಅವನು ಅವರನ್ನು ಸರಿಯಾಗಿ ಕೇರಿಗೆ ಮತ್ತು ಸಾವನಾನ ಗುಡಿಸಿಲಿಗೆ ಕರೆತಂದ.

ಉಳಿದೆಲ್ಲ ಗುಡಿಸಿಲುಗಳಲ್ಲೂ ಪೂರ್ತಿ ಕತ್ತಲಿತ್ತು. ಸಾವನಾನ ಗುಡಿಸಿಲಿನಲ್ಲಿ ಮಾತ್ರ ಒಂದು ಸಣ್ಣ ಬೆಳಕು. ಸದ್ದಿಲ್ಲದೆ ಗೋಡೆಯ ಹತ್ತಿರ ಬಂದ ಹುಡುಗರು ಬಿದಿರು ಕಿಟಕಿಯ ಮೂಲಕ ಇಣಿಕಿ ನೋಡಿದರು.

ಒಳಗೆ ಸಾವನಾ ಎಲ್ಲೋ ಹೋಗಲು ಸಿದ್ಧನಾಗುತ್ತಿದ್ದ. 'ದವೋ' ಎಂದು ಕರೆಯಲಾಗುವ ಅಗಲದಲುಗಿನ ಮಚ್ಚನ್ನು ಕೈಗೆತ್ತಿಕೊಂಡು ದೀಪವನ್ನು ಆರಿಸಿದ. ಬಾಗಿಲ ಚಿಲಕವನ್ನು ಸದ್ದಿಲ್ಲದೆ ತೆಗೆದು ಹೊರಕ್ಕೆ ಕಾಲಿಟ್ಟ.

ಹುಡುಗರು ಇನ್ನಷ್ಟು ಕತ್ತಲಿದ್ದೆಡೆಗೆ ಜರುಗಿದರು. ಕ್ಷಣಕಾಲ ನಿಂತು ಸುತ್ತಲೂ ದಿಟ್ಟಿಸಿದ. ಯಾರಾದರೂ ತನ್ನನ್ನು ಗಮನಿಸುತ್ತಿದ್ದಾರೆಯೇ, ಎಂದು. ಆಮೇಲೆ ಜೋರಿನಿಂದ ಹೆಜ್ಜೆಹಾಕಿ ನಡೆದ.

ಅವನ ಗಮನಕ್ಕೆ ಬರದಂತೆ ಸ್ವಲ್ಪ ದೂರದಲ್ಲಿ ಹುಡುಗರೂ ನಡೆದರು.

ಇದ್ದಕ್ಕಿದ್ದಂತೆ ರಾಜವೀರ್‌ನ ಹೃದಯ ಧಡ್ ಎಂದಿತು. ಮುನ್ಸೂಚನೆಯೇನೂ ಇಲ್ಲದೆ ಅವರ ಸುತ್ತಲೂ ದೀರ್ಘವಾದ ಕೀರಲು ಕೂಗುಗಳು ಕೇಳಿಸಿದುವು.

“ಏನದು?” ರಾಜವೀರ್ ಹೆದರಿದ ದನಿಯಿಂದ ಕೇಳಿದ.

“ನರಿಗಳು,” ಮೋಂಗ್ಲ ಪಿಸುಮಾತಿನಲ್ಲಿ ನುಡಿದ. “ಒಂದು ನರಿ ಕೂಗಿದರೆ, ಇಡೀ ಹಿಂಡು ಒಟ್ಟಾಗಿ ಕಿರುಲುತ್ತವೆ.”

ಭಯ ಮತ್ತು ಉದ್ವೇಗದಿಂದ ಪ್ರಾಂಜಲ್‌ನ ಹೊಟ್ಟೆಯಲ್ಲಿ ಹೆಪ್ಪು ಕಟ್ಟಿದಂತಾಗಿತ್ತು. ಕಾಳರಾತ್ರಿಯ ಬಿಗುವಿನ ವಾತಾವರಣ. ಬಿದಿರ ಮೆಳೆಗಳ ಮೂಲಕ ಸುಯ್‌ಗುಟ್ಟುವ ಗಾಳಿ. ನರಿಗಳ ಭಯಾನಕ ಕೂಗು. ಇವೆಲ್ಲ ಸೇರಿಕೊಂಡ ಬಿಕ್ಕಟ್ಟು. ಹತ್ತಿರದಲ್ಲೆಲ್ಲೋ ಚಿರತೆಯೂ ಇರಬಹುದು ಎಂದು ಕಸಿವಿಸಿ ಪಟ್ಟ

ಸಾವನಾನ ಹಿಂದೆ ಅವರುಗಳು ತೋಟದಾಚೆ ರಾಷ್ಟ್ರೀಯ ಹೆದ್ದಾರಿಗೆ ಹೋದರು. ಅಲ್ಲಿ ಪ್ರತಿ ಭಾನುವಾರ ಸಂತೆ ಸೇರುತ್ತಿತ್ತು. ವ್ಯಾಪಾರಿಗಳು ವಾಸದ ಮನೆ ಮತ್ತು ಅಂಗಡಿಗಳಾಗಿ ಬಳಸುತ್ತಿದ್ದ ಸಣ್ಣ ಸಿಮೆಂಟ್ ಕಟ್ಟಡಗಳ ಸಾಲು ಅಲ್ಲಿತ್ತು. ಅವುಗಳಲ್ಲೊಂದರ ಬಳಿಗೆ ಸಾವನಾ ಹೋಗಿ ಬಾಗಿಲನ್ನು ಜೋರಾಗಿ ಬಡಿದ.

ಒಂದೆರಡು ಮಾತುಗಳು. ಅನಂತರ ಬಾಗಿಲಿನ ಚಿಲಕ ತೆಗೆದು ಯಾರೋ ಸಾವನಾನನ್ನು ಒಳಕ್ಕೆ ಬಿಟ್ಟರು. ಅವನು ಪ್ರವೇಶಿಸಿದ ಕೂಡಲೆ ಬಾಗಿಲು ಮುಚ್ಚಿ ಚಿಲಕ ಹಾಕಿದರು.

ಅದಕ್ಕೂ ಮತ್ತು ಪಕ್ಕದ ಅಂಗಡಿಗೂ ನಡುವೆ ದುರ್ವಾಸನೆಯ ಚರಂಡಿಯಿದ್ದ ಸಣ್ಣ ಸಂದಿತ್ತು. ಹುಡುಗರು ದಾಟಿ ಹೋದರು. ಅವರ ಮೂಗುಗಳು ದುರ್ನಾತದಿಂದಾಗಿ ಮುರುಟಿಕೊಂಡುವು. ಒಬ್ಬರ ಹಿಂದೊಬ್ಬರು ಸದ್ದಿಲ್ಲದೆ ಸಾಲಾಗಿ ನಡೆದು ಅರೆತೆರೆದ ಕಿಟಕಿಯೊಂದರ ಹತ್ತಿರ ಹೋದರು. ಮೋಂಗ್ಲ ಬಲು ಹುಷಾರಿನಿಂದ ಇಣಿಕಿನೋಡಿ ಅನಂತರ ಪ್ರಾಂಜಲ್ ಮತ್ತು ರಾಜವೀರ್ ಕೂಡ ನೋಡಲಾಗುವಂತೆ ಪಕ್ಕಕ್ಕೆ ಸರಿದ.

ಒಂದು ಹಾಸಿಗೆಯ ಮೇಲೆ ಐದು ಜನ ಕಾಲುಗಳನ್ನು ಮಡಿಸಿ ಕೂತು ಇಸ್ಪೀಟ್ ಆಡುತ್ತಿದ್ದರು. ಸಾವನಾ ಮರದ ಸ್ಟೂಲಿನ ಮೇಲೆ ಕುಳಿತಿದ್ದ.

ಐದು ಜನರದ್ದೂ ವಿಕಾರವಾದ ದುಷ್ಟ ಮುಖಗಳು. ತಂಡದ ಮುಖಂಡನಂತೆಯೂ ಬಲಿಷ್ಟನಾಗಿಯೂ ಕಂಡುಬಂದ ಒಬ್ಬ ಧಡೂತಿ ಆಸಾಮಿಯ ಜೊತೆ ಸಾವನಾ ಮಾತನಾಡುತ್ತಿದ್ದ.

“ಈಗೆಲ್ಲ ಸಲೀಸಾಗಿದೆ,” ಸಾವನಾ ಹೇಳುತ್ತಿದ್ದ. ಡೇಕ ಮತ್ತು ಬಿರ್ಚಿ ಇಬ್ಬರೂ ತಪ್ಪು ಒಪ್ಪಿಕೊಂಡಿದ್ದಾರೆ. ಯಾಕೆ ಅನ್ನೋದಂತೂ ಆ ದೇವರಿಗೆ ಗೊತ್ತು.”

“ಅದಕ್ಕೆ ಕಾರಣ ಹೇಳೋದೇನೂ ಕಷ್ಟವಿಲ್ಲ” ಆ ದಪ್ಪ ಮನುಷ್ಯ ಉತ್ತರ ಕೊಟ್ಟ. “ಪೋಲೀಸಿನವರ ಹಿಂಸೆಗೆ ಹೆದರಿ ಒಪ್ಪಿಕೊಂಡಿದ್ದಾರೆ. ಕೋರ್ಟಿಗೆ ಬಂದ ಮೇಲೆ ಅದನ್ನು ನಿರಾಕರಿಸ್ತಾರೆ.”

“ನಾಳೆಯಿಂದ ಉಗ್ರಾಣವನ್ನು ಮತ್ತೆ ಉಪಯೋಗಿಸ್ತಾರಂತೆ ಮ್ಯಾನೇಜರು. ಟೀ ಪೆಟ್ಟಿಗೆಗಳು ಕಾರ್ಖಾನೆಯಲ್ಲಿ ತುಂಬಿಕೊಂಡಿವೆ. ಅವುಗಳನ್ನು ಬೇರೆ ಜಾಗಕ್ಕೆ ತರಲೇಬೇಕು. ಅಂದ್ರೆ, ಪೋಲೀಸಿನವರು.ಇದಕ್ಕೆ ಸಂಬಂಧಿಸಿಲ್ಲದವರನ್ನು ದಸ್ತಗಿರಿ ಮಾಡಿದ್ದಾರೆ ಅಂತ ಅವರಿಗೇನು ಗೊತ್ತಿಲ್ಲ”.



"ಈಗ ಅಲ್ಲಿರೋದು ಯಾವ ನಮೂನೆ ಚಹಾ?" ಗುಂಪಿನ ಮುಖಂಡ ಕೇಳಿದ.

"ಅದು ನಮ್ಮ ತೋಟದಲ್ಲೆಲ್ಲಾ ತುಂಬ ಚೆನ್ನಾಗಿರುವ ಚಹಾ. ಪೇಟೇಲಿ ಅದಕ್ಕೆ ಒಳ್ಳೆ ಬೆಲೆ ಸಿಕ್ಕುತ್ತೆ."

ಮುಖಂಡನ ಮುಖ ಹರ್ಷದಿಂದ ಹಿಗ್ಗಿತು. "ಹಾಗಾದರೆ ನಾಳೆ ರಾತ್ರಿ ಲೂಟಿ ಮಾಡೋಣ."

"ಉಳಿದವರು ಆಶ್ಚರ್ಯದಿಂದ ಉಸಿರೆಸೆದ ಸದ್ದು ಕೇಳಿಸಿತು. ಅವರು ಪ್ರತಿಭಟಿಸಿದರು.

"ನಮ್ಮ ಅದೃಷ್ಟಾನ ತೀರ ಹೆಚ್ಚು ಪರೀಕ್ಷೆ ಮಾಡಬಾರದು," ಎಂದು ಒಬ್ಬನೆಂದ.

"ಇಷ್ಟು ಬೇಗ ಎರಡನೆ ಸಲ ಕೊಳ್ಳೆಗೆ ಹೋಗೋದು ಅಪಾಯ," ಇನ್ನೊಬ್ಬನ ಮಾತು.

"ಏನೂ ಇಲ್ಲ," ಮುಖಂಡ ಭರವಸೆ ಕೊಟ್ಟ. "ಯಾವ ತಪ್ಪೂ ಆಗದಂಥ ವಿಧಾನ ನಮ್ಮದು. ಜೊತೆಗೆ ಅನಿರೀಕ್ಷಿತವಾಗಿ ಮಾಡೋ ಅನುಕೂಲ ಇದೆ. ಕಳ್ಳರು ಸಿಕ್ಕಿದ್ದಾರೆ ಅನ್ನುವ ನಂಬಿಕೆ ಇರುವುದರಿಂದ ಯಾರೂ ಇನ್ನೊಂದು ದಾಳಿ ನಡೆಯುತ್ತೇಂತ ಅಂದುಕೊಂಡಿರಲ್ಲ. ಮೊದಲನೆ ಸಲ ಅಷ್ಟು ಯಶಸ್ವಿಯಾಗಿ ಕೆಲಸ ಮಾಡಿದ್ದನ್ನೇ ಮತ್ತೆ ಮಾಡಬೇಕು, ಅಷ್ಟೆ."

"ಅಂದರೆ ಡೇಕ ಮತ್ತು ಬಿರ್ಚಿ ನಿಜವಾದ ತಪ್ಪಿತಸ್ಥರಲ್ಲ ಅಂತ ಪೋಲಿಸಿನವರಿಗೆ ತಕ್ಷಣ ತಿಳಿಯುತ್ತೆ" ಸಾವನಾ ಹೇಳಿದ.

"ಆದರೇನಂತೆ? ಇವತ್ತಲ್ಲ ನಾಳೆ ಅದು ಪೋಲೀಸಿನವರಿಗೆ ತಿಳಿದೇ ತಿಳಿಯುತ್ತೆ. ಇನ್ನೊಂದು ಲೂಟಿ ಹೊಡೆದರೆ ನಮಗೆಲ್ಲರಿಗೂ ಭರ್ಜರಿ ದುಡ್ಡು ಸಿಗುತ್ತೆ."

ಈಗ ಅವರೆಲ್ಲರ ಮುಖದಲ್ಲೂ ದುರಾಸೆ ಮಿನುಗಿತು. ಮುಂದೆ ಅವರನ್ನು ಒಪ್ಪಿಸೋದು ಕಷ್ಟವಾಗಲಿಲ್ಲ.

ಹುಡುಗರು ಇನ್ನು ಸ್ವಲ್ಪ ಹೊತ್ತು ಕೇಳುತ್ತಾ ನಿಂತಿದ್ದು ಆಮೇಲೆ ಹಿಂದಿರುಗಿದರು.

ಮೋಂಗ್ಲ ತಿಳಿಸಿದ - "ಈ ಮುಖಂಡ ಯಾರೂಂತ ನನಗೆ ಗೊತ್ತು. ಅವನೇ ಅಂಗಡಿ ಮಾಲೀಕ. ಉಳಿದವರು ನನಗೆ ಹೊಸಬರು."

"ನಾವು ಮಾಡಬಹುದಾದಷ್ಟೂ ಮಾಡಿದ್ದಾಗಿದೆ," ಪ್ರಾಂಜಲ್ ನುಡಿದ. "ಇನ್ನು ಮುಂದೆ ಪೋಲೀಸಿನವರ ಕೆಲಸ."

ಮೋಂಗ್ಲ ಅವರನ್ನು ಬಂಗಲೆತನಕ ತಂದುಬಿಟ್ಟು ನಮಸ್ಕಾರ ಅಂತ ಅಂದವನೇ ಕತ್ತಲಲ್ಲಿ ಮಾಯವಾದ.

# 10

ಮಾರನೆಯ ಬೆಳಿಗ್ಗೆ ಚೂಪು ತೋಕೆಯ ಎರಡು ಮ್ಯಾಗ್‌ಪೈ ಹಕ್ಕಿಗಳ ಜಗಳದ ಸದ್ದಿನಿಂದ ಹುಡುಗರಿಗೆ ಎಚ್ಚರವಾಯಿತು. ಎದ್ದವರು ಸೀದಾ ಬರುವಾ ಅವರ ಬಳಿಗೆ ಓಡಿದರು.

ಸುರಂಗ, ನದಿಯಲ್ಲಿ ದೋಣಿ, ಅಂಗಡಿಯವನೊಡನೆ ಸಾವನಾ ಶಾಮೀಲಾಗಿರುವುದು, ಕಳ್ಳರ ತಂಡ - ಮುಂತಾದ ವಿಷಯಗಳನ್ನು ಹುಡುಗರು ಹೇಳುತ್ತಿದ್ದಂತೆ ಬರುವಾ ಅವರು ಗಂಭೀರವಾಗಿ ಕೇಳಿದರು.

ಅನಂತರ ಅವರು ಪೋಲಿಸ್ ಠಾಣೆಗೆ ಫೋನ್ ಮಾಡಿದರು. ಕೂಡಲೇ ಕೊಟೊಕಿ ಅಲ್ಲಿಗೆ ಧಾವಿಸಿದರು. ಹುಡುಗರು ತಮ್ಮ ಕಥೆಯನ್ನು ಹೇಳಲಾರಂಭಿಸಿದಂತೆ ಮೊದಲು ಕೊಟೋಕಿ ಅವರ ಮಾತನ್ನು ತಳ್ಳಿ ಹಾಕಲು ಪ್ರಯತ್ನಿಸಿದರು. ಆದರೆ ಅವರು ಮುಂದುವರಿದಂತೆ ಕೊಟೊಕಿ ಅವರು ಕಸಿವಿಸಿಗೊಂಡು ಮುಖ ಕೆಂಪಾಯಿತು.

ಕಡೆಗೆ ಅವರು ತಾವು ಮೊದಲು ತೋರಿಸಿದ ದರ್ಪಕ್ಕಾಗಿ ಕ್ಷಮೆ ಕೇಳಿದರು. "ನೀವು ಹುಡುಗರಾದರೂ ಭರ್ಜರಿ ಕೆಲಸ ಮಾಡಿದ್ದೀರಿ," ಕೊಟೊಕಿ ಹೇಳಿದರು. "ಇನ್ನು ಆ ಗುಂಪನ್ನು ಹಿಡಿದುಬಿಡಬೇಕು. ಅವರು ಇವತ್ತು ರಾತ್ರಿ ಬಂದಾಗ, ಬಲೆ ಹಾಕಿರಬೇಕು."

ತೋಟದ ನಕ್ಷೆಯೊಂದನ್ನು ಬರುವಾ ತಂದರು. ಅವಿತಿಟ್ಟುಕೊಂಡು ಕಳ್ಳರನ್ನು ಹಿಡಿಯಲು ಸುರಂಗದ ಬಾಯಿ ಮತ್ತು ದೋಣಿಯೇ ಮುಖ್ಯ ಸ್ಥಳಗಳಾಗಿದ್ದುವು.

"ಈ ಸ್ಥಳಗಳಲ್ಲಿ ಹೆಚ್ಚು ಜನ ಪೋಲಿಸಿನವರನ್ನು ಇಡೋಣ. ಚಹಾ ಪೊದೆಗಳ ನಡುವೆ ಅವರು ಬಚ್ಚಿಟ್ಟುಕೊಂಡಿರುತ್ತಾರೆ. ಉಗ್ರಾಣದೊಳಗೆ ನಾನೇ ಇದ್ದು ಅಲ್ಲಿನ ಕೆಲಸ ನೋಡಿಕೊಳ್ಳೇನೆ."

"ಆ ಪೆಟ್ಟಿಗೆಗಳು ತುಂಬಾ ಭಾರ," ಬರುವಾ ಹೇಳಿದರು. "ಇಲ್ಲಿಂದ ನದಿಗೆ ಸುಮಾರು ದೂರ ಇದೆ. ಪೆಟ್ಟಿಗೆಗಳನ್ನು ಅವರು ದಾರಿಯುದ್ದಕ್ಕೂ ಹೊತ್ತುಕೊಂಡು ಹೋಗಲಾರರು."

"ಅದು ಸರಿ," ಕೊಟೊಕಿ ಒಪ್ಪಿದರು. "ಎಂಥದೋ ಒಂದು ವಾಹನವನ್ನು ತರಲೇಬೇಕು. ಅದು ಮೋಟಾರ್ ವಾಹನ ಇರಲಾರದು. ಸದ್ದು ಮಾಡದೆ ಇರುವಂಥದಾಗಬೇಕು."

"ನಿಮ್ಮ ಪೋಲಿಸ್ ಪೇದೆಗಳ ಸಹಾಯಕ್ಕೆ ತೋಟದ ಕೆಲವು ಕೆಲಸಗಾರರನ್ನು ಕರೆಸಲೇನು?" ಬರುವಾ ಕೇಳಿದರು.

"ಅದು ಬುದ್ಧಿವಂತಿಕೆಯಲ್ಲ," ಕೊಟೊಕಿ ಉತ್ತರವಿತ್ತರು. "ರಾತ್ರಿ ವೇಳೆ ಜಾಸ್ತಿ ಜನ ಇದ್ದರೆ ಗೊಂದಲವುಂಟಾಗುತ್ತೆ. ನನ್ನ ಪೋಲಿಸ್ ಪೇದೆಗಳು ಚೆನ್ನಾಗಿ ತರಪೇತಾದವರು. ಅವರ ಹತ್ತಿರ ಆಯುಧಗಳೂ ಇರುತ್ತವೆ. ಅವರು ಖಾಕಿಸಮವಸ್ತ್ರ ಇಲ್ಲದೆ ಬರೋಹಾಗೆ ಮಾಡ್ತೇನೆ."

"ಅದೇಕೆ ಬೇಕು?" ರಾಜವೀರ್ ಕೇಳಿದ. "ಅವರು ಏನು ಹಾಕ್ಕೊಂಡಿದ್ದಾರೆ ಅಂತ ಯಾರಿಗೂ ಕಾಣಿಸೋದಿಲ್ಲ - ಅಷ್ಟು ಕತ್ತಲಾಗಿರುತ್ತೆ."

"ನಾನು ಹಾಕಿರೋ ಹಂಚಿಕೆಗೆ ಅವರು ಸಾದಾ ಬಟ್ಟೇಲೇ ಇರಬೇಕು." ಕೊಟೊಕಿ ತಿಳಿಸಿದರು. "ನೋಡಿ, ನದಿಯ ಆಚೆ ದಡದಲ್ಲಿ ಲಾರಿ ಕಾಯ್ತಾ ಇರುತ್ತೆ. ಅದರ ಮೇಲೆ ಮುಂಚೆಯೇ ಕಳ್ಳತನ ಮಾಡಿದ ಚಹಾ ಪೆಟ್ಟಿಗೆಗಳು ಇವೆ. ಅದರಿಂದ ನಮ್ಮ ಉಪಾಯ ಹೀಗಿರಬೇಕು...."

* * *

ತುಂಬ ಕತ್ತಲಾಗಿತ್ತು. ಸೆಖೆ ಬೇರೆ. ಮೋಡ ತುಂಬಿದ ಆಕಾಶದಲ್ಲಿ ಚಂದ್ರ, ನಕ್ಷತ್ರಗಳು ಕಾಣಿಸುತ್ತಿರಲಿಲ್ಲ. ದೂರದಲ್ಲಿ ಕತ್ತಲ ನೆರಳುಗಳಲ್ಲಿ ಆಯುಧಗಳನ್ನಿಟ್ಟಿದ್ದ ಪೋಲಿಸಿನವರು ನಿಶ್ಶಬ್ದವಾಗಿ ಕಾದಿದ್ದರು. ಅವರ ಮುಖಗಳಲ್ಲಿ ಬಿಗಿತ.

ಉಗ್ರಾಣದೊಳಗೆ ಕೊಟೊಕಿ ಮತ್ತು ಇತರ ಮೂವರು ಟೀ ಪೆಟ್ಟಿಗೆಗಳ ಹಿಂದೆ ಬಗ್ಗಿ ಕಾದಿದ್ದರು. ಅವರುಗಳ ಕೈಗಳಲ್ಲಿ ಬಾರು ಮಾಡಿದ ಪಿಸ್ತೂಲುಗಳು.

ಬರುವಾ ಅವರ ಹತ್ತಿರ ಒಂದು ಬಂದೂಕಿತ್ತು. ಅವರು ನೆರಳಿಗಾಗಿ ಬೆಳೆಸಿದ್ದ ಒಂದು ದೊಡ್ಡ ಮರದ ಹಿಂದೆ ನಿಂತಿದ್ದರು - ಸುರಂಗದ ಬಾಗಿಲಿಂದ ಸ್ವಲ್ಪ ದೂರದಲ್ಲಿ. ರಾಜವೀರ್, ಪ್ರಾಂಜಲ್, ಅಲಕಾ ಮತ್ತು ಮೋಂಗ್ಲ ಅವರ ಹತ್ತಿರದಲ್ಲೇ ಒತ್ತಾಗಿ ಅಡಗಿದ್ದರು. ಉದ್ವೇಗದಿಂದ ಅವರ ಹೃದಯಗಳು ಢಡಢಡ ಬಡಿಯುತ್ತಿದ್ದವು. ಎಂಥ ಸಣ್ಣ ಸದ್ದಾದರೂ ಕೇಳಲೆಂದು ಕಿವಿಗಳು ಚುರುಕಿನಲ್ಲಿದ್ದುವು. ಅವರ ಕಾಲ ಬಳಿ ಟ್ರ್ಯಾಫಿ ಕೂತಿತ್ತು - ನೆರಳಿನಂತೆ ನಿಶ್ಶಬ್ದವಾಗಿ.

ಸೊಳ್ಳೆಗಳನ್ನೂ ಜಿಗಣೆಗಳನ್ನೂ ದೂರವಿಡಲು ಅವರೆಲ್ಲ ಮೈಮೇಲೆ ಉಪ್ಪುನೀರನ್ನೂ ನಿಂಬೆಹುಲ್ಲೆಣ್ಣೆಯನ್ನೂ ಹಚ್ಚಿಕೊಂಡಿದ್ದರು. ಒಬ್ಬೊಬ್ಬರ ತಲೆ ಸುತ್ತಲೂ ಸೊಳ್ಳೆಗಳ ಗುಂಪು ಡುರ್ರೆಂದು ಕೋಪದಿಂದ ತಿರುಗುತ್ತಿತ್ತು। ಅದರ ಹೊರತು ಬೇರೇನೂ ಸದ್ದಿಲ್ಲ.





ಇದ್ದಕ್ಕಿದ್ದಂತೆ ಟ್ರ್ಯಾಫಿ ಮೈಯನ್ನು ನಿಮಿರಿಸಿ ಮೆಲ್ಲನೆ ಗಂಟಲಿನಾಳದಿಂದ ಗುರುಗುಟ್ಟಿತು.

ಒಬ್ಬೊಬ್ಬರೂ ನೆಟ್ಟಗಾಗಿ, ಕತ್ತಲನ್ನೇ ಚುಚ್ಚುವಂತೆ ದಿಟ್ಟಿಸಿದರು. ಮೊದಲು ಕಿರುಗುಟ್ಟುವ ಶಬ್ದ ಕೇಳಿಸಿ ಅನಂತರ ಎತ್ತಿನ ಗಾಡಿಯ ಆಕಾರ ಮೇಲೆದ್ದು ಬಂದಿತು.

ಮೋಂಗ್ಲ ತಿರಸ್ಕಾರದಿಂದಲೇ ಪಿಸುಮಾತಿನಲ್ಲಿ ಹೇಳಿದ - "ಸಾವನಾನ ಎತ್ತು! ಚಿರತೆ ಎತ್ತುಕೊಂಡು ಹೋದ ಎತ್ತು!"

ಸುರಂಗದ ಬಾಗಿಲ ಬಳಿ ಎತ್ತಿನಗಾಡಿ ನಿಂತಿತು. ನಾಲ್ಕು ಜನ ಕೆಳಕ್ಕೆ ಹಾರಿ ಅವಸರದಲ್ಲಿ ಬಿದಿರ ತಡಿಕೆಯನ್ನು ಎತ್ತಿದರು. ಮೂವರು ಸುರಂಗದೊಳಕ್ಕೆ ಹೋದರು. ಒಬ್ಬ ಹೊರಗೇ ನಿಂತ.

ಎತ್ತಿನ ಗಾಡಿಯಲ್ಲಿ ಭಗ್ಗೆಂದು ಬೆಂಕಿಕಡ್ಡಿಯ ಉರಿ ಹೊತ್ತಿಕೊಂಡಿತು. ಗಾಡಿ ಹೊಡೆಯುವವನು ಬೀಡಿ ಹೊತ್ತಿಸಿಕೊಂಡ. ಕಡ್ಡಿಯ ಬೆಳಕಿನಲ್ಲಿ ಬೊಕ್ಕೆ ತುಂಬಿದ ವಕ್ರಮುಖ ಕಾಣಿಸಿತು. ಅವನು ಸಾವನಾ!

ಸುಮಾರು ಇಪ್ಪತ್ತು ನಿಮಿಷಗಳ ನಂತರ ಮೊದಲ ಚಹಾ ಪೆಟ್ಟಿಗೆ ಸುರಂಗದ ಬಾಯಿನಬಳಿ ಕಾಣಿಸಿತು. ಹೊರಗಿದ್ದವನು ಅದನ್ನು ಹಿಡಿದುಕೊಂಡು ಸಾವನಾನ ಸಹಾಯದೊಡನೆ ಗಾಡಿಯ ಮೇಲಿಟ್ಟ.

ಚಹಾ ಪೊದೆಗಳ ನಡುವೆ ಅಡಗಿದ್ದ ಪೋಲಿಸಿನವರಲ್ಲಿ ಒಬ್ಬ ಹಿಸ್ಸೆಂದು ಶಬ್ದಮಾಡಿ "ಈಗಲೇ" ಎಂದ. ಎಲ್ಲ ಕಡೆಗಳಿಂದಲೂ ಪೋಲಿಸಿನವರು ನಿಶ್ಶಬ್ದವಾಗಿ ಮುನ್ನುಗ್ಗಿ ಬಂದರು. ಎಲ್ಲರ ಕೈಯಲ್ಲೂ ಸಿದ್ಧವಾಗಿ ಹಿಡಿದ ಬಂದೂಕುಗಳು. ಸಾವನಾ ಮತ್ತು ಆ ಇನ್ನೊಬ್ಬ ಹಠಾತ್ತಾಗಿ ಹೀಗೆ ತಮ್ಮನ್ನು ಸುತ್ತುವರಿದುದ್ದನ್ನು ಕಂಡು ಚಕಿತರಾಗಿ ಬಿಟ್ಟ ಬಾಯಿನಿಂದ ನಿಂತರು. ಕೈಕೋಳಗಳನ್ನು ಪೋಲಿಸಿನವರು ತೊಡಿಸಿದರು.

ಉಗ್ರಾಣದಲ್ಲಿ ಕಳ್ಳ ಎರಡನೆ ಟೀ ಪೆಟ್ಟಿಗೆಯನ್ನು ಎತ್ತುತ್ತಿದ್ದಂತೆಯೇ ಕೊಟೊಕಿ ಮತ್ತು ಆತನ ಸಂಗಡಿಗರು ಅವಿತುಕೊಂಡಿದ್ದ ಸ್ಥಳಗಳಿಂದ ಹಠಾತ್ ಮೇಲೆದ್ದು ಬಂದರು. ಅವನೇ ಕಳ್ಳರ ತಂಡದ ಮುಖಂಡ. ಬಲು ಚುರುಕಾದ ಆಸಾಮಿ. ಪೆಟ್ಟಿಗೆಯನ್ನು ಕೆಳಕ್ಕೆ ಹಾಕಿ ತಾನು ನೆಲದ ಮೇಲೆ ಮಲಗಿದ. ಸೊಂಟಕ್ಕೆ ಕಟ್ಟಿದ್ದ ಪಿಸ್ತೂಲಿನೆಡೆಗೆ ಕೈ ಜರುಗುತ್ತಿದ್ದಂತೆ ಕೊಟೊಕಿಯ ತುಪಾಕಿ ಒಮ್ಮೆ ಹಾರಿತು. ಬಿದ್ದವನ ಬಲ ಭುಜದ ಕೆಳಗೆ ಗುಂಡು ಹೊಡೆದಂತೆ ಅವನು ನೋವಿನಿಂದ ಕಿರುಲಿದ.

ಸುರಂಗದೊಳಗಿದ್ದ ಇನ್ನಿಬ್ಬರು ಬಂದೂಕಿನ ಶಬ್ದದಿಂದ ಹೆದರಿ ಅದರ ಇನ್ನೊಂದು ಬಾಯಿನ ಕಡೆಗೆ ಆವೇಶದಿಂದ ತೆವಳಿದರು. ಅಲ್ಲಿ ಕಾದಿದ್ದ ಪೋಲಿಸಿನವರ ಕೈಗೆ ಸಿಕ್ಕಿ ಬಿದ್ದರು.

ಗಾಡಿಯ ಬಳಿಯಿದ್ದ ನಾಲ್ವರು ಕೈದಿಗಳನ್ನೂ ಉಗ್ರಾಣಕ್ಕೆ ಕರೆದೊಯ್ಯಲಾಯಿತು. ಜೊತೆಗಿದ್ದ ಪೋಲಿಸಿನವರ ಹಿಂದೆಯೇ ಬರುವಾ ಅವರೂ ಮಕ್ಕಳೂ ತೆರಳಿದರು.

ನಗುಮುಖದ ಕೊಟೊಕಿ ಹೇಳಿದರು - "ಭರ್ಜರಿ ಸಂಪಾದನೆ ಆಯಿತು! ಇವರ ಗೆಳೆಯ ದೋಣಿಯಲ್ಲಿರೋನು ಕೂಡ ಬರುವ ಸಮಯ ಆಗಿದೆ."

ತಮ್ಮ ಕೆಲಸಕ್ಕೆ ಪಶ್ಚಾತ್ತಾಪವೇ ಇಲ್ಲದ ಕೈದಿಗಳು ಕೋಪದ ಕಣ್ಣುಗಳಿಂದ ಅವನತ್ತ ದುರುಗುಟ್ಟಿ ನೋಡಿದರು.

ಮುಖಂಡನಿಗೆ ಚಿಕಿತ್ಸೆ ಮಾಡಲು ತೋಟದ ಡಾಕ್ಟರ್‌ಗೆ ಬರುವಾ ಹೇಳಿಕಳಿಸಿದರು. ತುಪಾಕಿಯ ಗುಂಡು ಯಾವ ಮುಖ್ಯ ಅಂಗಕ್ಕೂ ಗಾಯಮಾಡದೆ ತೂರಿಹೋಗಿತ್ತು.

ವೈದ್ಯರು ಬಂದು ಗಾಯಕ್ಕೆ ಇಲಾಜು ಮಾಡುತ್ತಿದ್ದಂತೆ ದೋಣಿಯವನನ್ನು ಬಿರುಸು ಮುಖದ ಪೋಲೀಸ್ ಪೇದೆ ಉಗ್ರಾಣದೊಳಕ್ಕೆ ತಳ್ಳಿದ.

"ಓಡೇ ಹೋಗ್ಬಿಟ್ಟಿದ್ದ ಸ್ವಾಮಿ," ಪೇದೆ ಹೇಳಿದ. "ನದಿ ಒಳಗಿಂದ ಎಳಕೊಂಡು ಬಂದೆ. ಮೀನಿನ ಥರ ನುಣುಚಿಕೊಳ್ತಾನೆ."

* * *

ಆಮೇಲೆ ಅವರುಗಳು ತಾವು ಹಾಕಿಕೊಂಡಿದ್ದ ಹಂಚಿಕೆಯನ್ನು ಸಲೀಸಾಗಿ ನಡೆಸಿಕೊಂಡು ಹೋದರು. ಕಳ್ಳರಿಗೆ ಸಂಶಯವೇನೂ ಬರದಂತೆ ಸುಮಾರು ಎರಡು ಗಂಟೆಕಾಲ ಸುಮ್ಮನಿದ್ದ ಮೇಲೆ ಅಂಬಿಗನೂ ಮತ್ತು ಕಳ್ಳರ ನಾಯಕನೂ ದಾರಿ ತೋರಿಸಿದಂತೆ ಕೊಟೊಕಿ ಅವರ ನೇತೃತ್ವದಲ್ಲಿ ಪೋಲಿಸಿನವರ ತಂಡ ನದಿಯ ಎದುರು ದಂಡೆಗೆ ಹೊರಟಿತು.



ಟ್ರಕ್ಕನ್ನು ನಿಲ್ಲಿಸಿಕೊಂಡು ಮೂವರು ಕಾಯುತ್ತಿದ್ದರು. ಅವರು ನಿರೀಕ್ಷಿಸುತ್ತಿದ್ದಂತೆ ಚಹಾ ಪೆಟ್ಟಿಗೆಗಳು ಬರುವುದರ ಬದಲು ಸಾದಾ ಉಡುಪಿನಲ್ಲಿ ದೋಣಿ ತುಂಬಿದ್ದ ಪೋಲೀಸಿನವರ ತಂಡ ಬಂದಾಗ ಅವರ ಬದುಕಿನಲ್ಲೇ ಇದುವರೆಗೆ ಆಗಿರದಿದ್ದಷ್ಟು ಗಾಬರಿ ಉಂಟಾಯಿತು. ಹೊಡೆದಾಟವೇ ಇಲ್ಲದೆ ಅವರು ಶರಣಾದರು.

ಕಳ್ಳರ ತಂಡ ಕೊಟ್ಟ ಸಮಾಚಾರದಂತೆ, ಹತ್ತಿರದ ಪಟ್ಟಣದ ಒಂದು ಗಡಂಗಿನ ಮೇಲೆ ಪೋಲಿಸಿನವರು ಅದೇ ರಾತ್ರಿ ದಾಳಿ ನಡೆಸಿದರು. ಈ ಮುಂಚೆ ಕಳ್ಳತನವಾಗಿದ್ದ ಟೀ ಪೆಟ್ಟಿಗೆಗಳೆಲ್ಲ ಅಲ್ಲಿ ಸಿಕ್ಕಿದುವು.

ನಾಪತ್ತೆಯಾಗಿದ್ದ ಟೀ ಪೆಟ್ಟಿಗೆಗಳ ಪ್ರಸಂಗ ಮರುದಿನ ಅರುಣೋದಯಕ್ಕೆ ಮುನ್ನವೇ ಪರಿಹಾರವಾಗಿತ್ತು.



